# ರವಿ ಬೆಳಗೆರೆ ಅವರ ಕಥೆಗಳು: ಸಾಹಿತ್ಯಿಕ ವಿಶ್ಲೇಷಣೆ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ರಾಜೇಂದ್ರ

ಮಾರ್ಗದರ್ಶಕರು
ಡಾ. ಬಿ.ಎಂ. ಪುಟ್ಟಯ್ಯ



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ,
ವಿದ್ಯಾರಣ್ಯ, ಹಂಪಿ.
೨೦೦೯-೧೦

# ರವಿ ಬೆಳಗೆರೆ ಅವರ ಕಥೆಗಳು: ಸಾಹಿತ್ಯಿಕ ವಿಶ್ಲೇಷಣೆ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ರಾಜೇಂದ್ರ

ಮಾರ್ಗದರ್ಶಕರು
ಡಾ. ಬಿ.ಎಂ. ಪುಟ್ಟಯ್ಯ




ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ,
ವಿದ್ಯಾರಣ್ಯ, ಹಂಪಿ.
೨೦೦೯-೧೦



## ಸಂಶೋಧಕರ ಪ್ರಮಾಣ ಪತ್ರ

**'ರವಿ ಬೆಳಗೆರೆ ಅವರ ಕಥೆಗಳು: ಸಾಹಿತ್ಯಿಕ ವಿಶ್ಲೇಷಣೆ'** ಎಂಬ ನಿಬಂಧವನ್ನು **ಡಾ. ಬಿ.ಎಂ. ಪುಟ್ಟಯ್ಯ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಈ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: ೧೪.೦೯.೨೦೧೦

**ರಾಜೇಂದ್ರ**

ಸಂಶೋಧಕರು

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಮಾರ್ಗದರ್ಶಕರ ದೃಢೀಕರಣ ಪತ್ರ

**'ರವಿ ಬೆಳಗೆರೆ ಅವರ ಕಥೆಗಳು: ಸಾಹಿತ್ಯಿಕ ವಿಶ್ಲೇಷಣೆ'** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ರಾಜೇಂದ್ರ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: ೧೪.೦೯.೨೦೧೦

**ಡಾ. ಬಿ.ಎಂ. ಪುಟ್ಟಯ್ಯ**
ಮಾರ್ಗದರ್ಶಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

# ಪರಿವಿಡಿ

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

೮೦ರ ದಶಕದ ಆರಂಭದಲ್ಲಿ ಕಂಡುಬರುವ ಶಕ್ತ ಕಥೆಗಾರರಲ್ಲಿ 'ರವಿ ಬೆಳಗೆರೆ' ಪ್ರಮುಖರು. ಕನ್ನಡ ಸಾಹಿತ್ಯಕ್ಕೆ 'ಬೆಳಗೆರೆ ಕುಟುಂಬ'ದ ಕೊಡುಗೆ ಅನನ್ಯವಾದುದು. ರವಿ ಬೆಳಗೆರೆಯವರ ತಾಯಿ 'ಬೆಳಗೆರೆ ಪಾರ್ವತಮ್ಮ' ಸ್ವತಃ ಕವಯಿತ್ರಿ ಹಾಗೂ ಕಥೆಗಾರ್ತಿ. ನವೋದಯ ಕಾಲಘಟ್ಟದ ಮೊದಲ ಕವಯಿತ್ರಿ 'ಬೆಳಗೆರೆ ಜಾನಕಮ್ಮ' ರವಿಯವರ ದೊಡ್ಡಮ್ಮ. ಸೋದರ ಮಾವಂದಿರಾದ 'ಬೆಳಗೆರೆ ಕೃಷ್ಣಶಾಸ್ತ್ರಿ', 'ಸೀತಾರಾಮ ಶಾಸ್ತ್ರಿ' (ಕಾವ್ಯನಾಮ: ಕ್ಷೀರ ಸಾಗರ)ಗಳೂ ಸಾಹಿತಿಗಳೇ. ಇವರೆಲ್ಲಾ ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ಪುಟ್ಟಗ್ರಾಮ 'ಬೆಳಗೆರೆ'. ಇದು ರವಿ ಬೆಳಗೆರೆಯವರ ತಾಯಿ ಪಾರ್ವತಮ್ಮನವರ ಹುಟ್ಟೂರು. ಆದರೆ ರವಿಯವರು ಹುಟ್ಟಿ ಬೆಳೆದಿದ್ದು ಹಾಗೂ ಸಾಹಿತ್ಯಿಕ ಕೃಷಿ ಮಾಡಲು ಪ್ರಾರಂಭಿಸಿದ್ದು ಬಳ್ಳಾರಿಯಿಂದಲೇ. ಜೊತೆಗೆ ತಮ್ಮ ಸಂಪಾದತ್ವದಲ್ಲಿ 'ಬಳ್ಳಾರಿ ಪತ್ರಿಕೆ'ಯನ್ನು ಪ್ರಾರಂಭಿಸುವುದರ ಮೂಲಕ ಪತ್ರಕರ್ತರಾಗಿ ರೂಪುಗೊಂಡಿದ್ದು ಇಲ್ಲಿಯೇ. ರವಿ ಬೆಳಗೆರೆಯವರು ಮಾರ್ಚ್ ೧೫,೧೯೫೮ರಂದು ಬಳ್ಳಾರಿಯ ಸತ್ಯನಾರಾಯಣ ಪೇಟೆಯಲ್ಲಿ ಜನಿಸಿದರು.

ಕನ್ನಡದ ಬಹುತೇಕ ಲೇಖಕರು ಆರಂಭದಲ್ಲಿ ಕಥೆಗಾರರಾಗಿಯೇ ಸಾಹಿತ್ಯ ಲೋಕವನ್ನು ಪ್ರವೇಶಿಸಿದ್ದು ವಿಶಿಷ್ಟವಾದ ಸಂಗತಿಯಾಗಿದೆ. ಬೆಳಗೆರೆಯವರೂ ಕೂಡ ಪ್ರಾರಂಭದಲ್ಲಿ ಕಥೆಗಾರರಾಗಿಯೇ ಸಾಹಿತ್ಯ ಲೋಕವನ್ನು ಪ್ರವೇಶಿಸಿದರು. ತಮ್ಮ ೨೧ನೇ(೧೯೭೯) ವಯಸ್ಸಿನಿಂದಲೇ ಕಥೆಗಳನ್ನು ಬರೆಯಲು ಆರಂಭಿಸಿದ ರವಿಯವರು ತಮ್ಮ ಕಥೆಗಳ ಮೂಲಕ ಮನುಷ್ಯನ ದೈನಂದಿನ ಬದುಕಿನ ಸೂಕ್ಷ್ಮತೆಗಳು, ಸಾಮಾಜಿಕ ಶೋಷಣೆ, ಗಂಡು ಹೆಣ್ಣಿನ ಸಂಬಂಧ, ಕಷ್ಟ ಬದುಕಿನ ಕರಾಳ ಚಿತ್ರಣ ಇವುಗಳನ್ನೆಲ್ಲಾ ಪರಿಣಾಮಕಾರಿಯಾಗಿ, ವೈವಿಧ್ಯಮಯವಾಗಿ ಒಡಮೂಡಿಸಿದ್ದಾರೆ.

ರವಿ ಬೆಳಗೆರೆಯವರ ಸಮಕಾಲೀನ ಸಾಹಿತಿ 'ನಾಗತಿಹಳ್ಳಿ ಚಂದ್ರಶೇಖರ್'. ಇವರಿಬ್ಬರ ಬರಹಗಳ ಬಗ್ಗೆ 'ಚಂದ್ರಶೇಖರ ಕಂಬಾರ'ರು ಹೀಗೆ ಹೇಳಿದ್ದಾರೆ... "ಇಬ್ಬರು ತರುಣ ಮಿತ್ರರ ಗದ್ಯ ಬರಹವನ್ನು ಅವು ಸಿಕ್ಕುವುದೇ ತಡ ತಪ್ಪದೇ ಓದುತ್ತೇನೆ. ಕಾರಣ ಇಬ್ಬರೂ ಕನ್ನಡವನ್ನು, ಅದರ ಹೊಸಲಯಗಳನ್ನು ಗ್ರಹಿಸುವ, ಅಂದಗೆಡಿಸದಂತೆ ಪ್ರಮಾಣಬದ್ಧವಾಗಿ ಬಳಸುವ, ಬೇಸೂರಾಗದ ಹಾಗೆ ವಿಸ್ತರಿಸುವ ರಹಸ್ಯಗಳನ್ನರಿತವರು. ಒಬ್ಬರು ರವಿ ಬೆಳಗೆರೆ. ಇನ್ನೊಬ್ಬರು ನಾಗತಿಹಳ್ಳಿ ಚಂದ್ರಶೇಖರ. ಕನ್ನಡ ಬಳಸುವಲ್ಲಿ ಇಬ್ಬರ ಉದ್ದೇಶಗಳು ಬೇರೆ ಬೇರೆ. ರವಿಯ ಗದ್ಯಕ್ಕೆ ತೀವ್ರತೆ, ಮೊನಚು ಹೆಚ್ಚು. ಇರಿದು ತಕ್ಷಣ ಹೊರ ಬರುವ ಚೂರಿಯಂಥ 'ಹಾಯ್ ಬೆಂಗಳೂರ್!'ನ ಭಾಷೆ, ಅಂಥ ಗದ್ಯದ ಶಕ್ತಿ ಎಂಥದೆಂಬುದನ್ನು ಅವರ ಉತ್ಕೃಷ್ಟ ಕಾದಂಬರಿ 'ಮಾಂಡೋವಿ' ಓದಿಯೇ ತಿಳಿಯಬೇಕು. ಈ ಇಬ್ಬರೂ ಏನು ಬರೆದರೂ ಓದುತ್ತೇನೆ. ಏಕೆಂದರೆ ಇವರ ಬರವಣಿಗೆ ಚೇತೋಹಾರಿಯಾದದ್ದು. ಮಳಲನ್ನು ಚಿಗುರಿಸುವಂಥದ್ದು"[7] ಎಂದಿದ್ದಾರೆ.

## ಅಧ್ಯಯನದ ಉದ್ದೇಶ

ರವಿ ಬೆಳಗೆರೆಯವರು ಮೂಲತಃ ಪತ್ರಕರ್ತರು. ಪ್ರಸ್ತುತ 'ಹಾಯ್ ಬೆಂಗಳೂರ್!' ವಾರ ಪತ್ರಿಕೆಯ ಸಂಪಾದಕರು. ಪತ್ರಿಕೋದ್ಯಮದಲ್ಲಿದ್ದುಕೊಂಡೇ ಕಥೆಗಾರರಾಗಿ ಉಳಿದವರು ತುಂಬಾ ವಿರಳ. ಭಾರತೀಯ ಇಂಗ್ಲಿಷ್‌ನಲ್ಲಿ ಖುಷ್‌ವಂತ್ ಸಿಂಗ್, ಕನ್ನಡದಲ್ಲಿ ಪಿ. ಲಂಕೇಶ್ ಹಾಗೂ ರವಿ ಬೆಳಗೆರೆಯವರನ್ನು ಕಾಣಬಹುದು. 'ಪತ್ರಿಕೋದ್ಯಮದ ಭಾಷೆ ಸೃಜನಶೀಲತೆಯನ್ನು ಮೊಟಕುಗೊಳಿಸುತ್ತದೆ' ಎಂಬ ಮಾತಿಗೆ ಅಪವಾದವಾಗಿರುವ ರವಿಯವರು ಸಾಹಿತ್ಯದ ವಿವಿಧ ಪ್ರಕಾರಗಳಾದ ಕಥೆ, ಕಾದಂಬರಿ, ಪ್ರವಾಸ ಕಥನ, ಅನುವಾದ, ಜೀವನ ಚರಿತ್ರೆ, ಆತ್ಮ ಕಥನ, ಅಂಕಣ ಬರಹ, ಪತ್ರ ಸಾಹಿತ್ಯ... ಹೀಗೆ ಹಲವಾರು ಕ್ಷೇತ್ರಗಳಲ್ಲಿ ಸಾಹಿತ್ಯ ರಚನೆ ಮಾಡಿದ ಬಹುಮುಖ ಪ್ರತಿಭೆಯುಳ್ಳವರು. ತಮ್ಮ ವಿಭಿನ್ನವಾದ ಬರವಣಿಗೆಯ ಶೈಲಿಯಿಂದ ತಮ್ಮದೇ ಆದ ಓದುಗ ಸಮೂಹವನ್ನು ಸೃಷ್ಟಿಸಿಕೊಂಡಿರುವ ಇವರು ಕನ್ನಡದ ಅಪರೂಪದ ಕಥೆಗಾರರು, ಸಾಹಿತಿಗಳು ಹಾಗೂ ಜನಪ್ರಿಯ ಪತ್ರಕರ್ತರು. ಆದರೂ ಇವರ ಕಥೆಗಳು ವಿಮರ್ಶಕರ ನಿರ್ಲಕ್ಷ್ಯಕ್ಕೆ ಒಳಗಾಗಿರುವುದು ವಿಪರ್ಯಾಸ. ವಿಮರ್ಶಕರ ನಿರ್ಲಕ್ಷಕ್ಕೆ ಒಳಗಾದರೂ ಓದುಗರ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯಬಲ್ಲ ಸತ್ವ ರವಿಯವರ ಕಥೆಗಳಲ್ಲಿದೆ. ಗಂಡು ಹೆಣ್ಣಿನ ಸಂಬಂಧಗಳ ಬಗ್ಗೆ ತುಂಬಾ ರೋಮ್ಯಾಂಟಿಕ್ ಆಗಿ ಬರೆಯಬಲ್ಲ ರವಿಯವರು ಬದುಕಿನ ನಿರೀಂದ್ರಿಯ ಸ್ಥಿತಿಯ ಬಗ್ಗೆಯೂ ಅಷ್ಟೇ ತೀವ್ರತೆ, ಆಸಕ್ತಿಯಿಂದ ಬರೆಯಬಲ್ಲರೆಂಬುದು ಅವರ ಕಥೆಗಳನ್ನು ಓದಿದಾಗ ವಿದಿತವಾಗುತ್ತದೆ.

ವಿಮರ್ಶೆಯ ನಿರ್ಲಕ್ಷ್ಯಕ್ಕೆ ಒಳಗಾಗಿಯೂ ಜೀವಂತಿಕೆಯನ್ನು ಉಳಿಸಿಕೊಂಡಿರುವ ಇವರ ಕಥೆಗಳ ವಸ್ತು, ಭಾಷೆ, ಪಾತ್ರ ಚಿತ್ರಣ, ಕಥನ ಕ್ರಮ ಮುಂತಾದವುಗಳನ್ನು ಚರ್ಚಿಸುವುದೇ ಈ ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಯನದ ವ್ಯಾಪ್ತಿ**

'ರವಿ ಬೆಳಗೆರೆ ಅವರ ಕಥೆಗಳು: ಸಾಹಿತ್ಯಿಕ ವಿಶ್ಲೇಷಣೆ' ಎಂಬ ವಿಷಯದ ಹಿನ್ನೆಲೆಯಲ್ಲಿ ರವಿ ಬೆಳಗೆರೆಯವರ ಇದುವರೆಗಿನ ಸಮಗ್ರ ಕಥೆಗಳನ್ನು (ಒಟ್ಟು ೨೩ ಕಥೆಗಳು) ಅಧ್ಯಯನದ ವ್ಯಾಪ್ತಿಗೆ ಸೀಮಿತವಾಗಿಟ್ಟುಕೊಳ್ಳಲಾಗಿದೆ.

ರವಿಯವರ ಮೊದಲ ಕಥಾ ಸಂಕಲನ **'ದಾರಿ'**. ಇದು ೧೯೮೦ರಲ್ಲಿ 'ಪ್ರದೀಪ ಪ್ರಕಾಶನ, ಬಳ್ಳಾರಿ'ಯಿಂದ ಪ್ರಕಟವಾಗಿದೆ. ಈ ಸಂಕಲನದಲ್ಲಿ ಒಟ್ಟು ೫ ಕಥೆಗಳಿದ್ದು ('ಶಾಲಿನಿ', 'ಹಂತ', 'ಬದುಕೊಂದು ಸತತ ಅಭ್ಯಾಸ', 'ದಾರಿ', 'ಕತ್ತಲೆ ನೋವು ಮತ್ತು ಹೆಣ') ಪ್ರತಿಯೊಂದು ಕಥೆಯೂ ಓದುಗನಿಗೆ ವಿಭಿನ್ನ ಅನುಭವವನ್ನು ನೀಡುತ್ತದೆ.

ರವಿಯವರ ಎರಡನೇ ಕಥಾ ಸಂಕಲನ **'ಪಾ.ವೆಂ. ಹೇಳಿದ ಕಥೆ'**. ಇದು 'ಅಭಿನವ ಪ್ರಕಾಶನ, ಬೆಂಗಳೂರು'ನಿಂದ ೧೯೯೫ರಲ್ಲಿ ಪ್ರಕಟವಾಗಿದೆ. ಇದರಲ್ಲಿ ಒಟ್ಟು ೧೩ ಕಥೆಗಳಿವೆ. ('ಪಾ.ವೆಂ. ಹೇಳಿದ ಕಥೆ', 'ವಂಧ್ಯಾ', ಭ್ರೂಣ ಸಂಭಾಷಣೆ', 'ಮಿನಾರುಗಳ ಊರಿನಲ್ಲಿ ಅವರು', 'ಕುಹು ಕುಹರ', 'ವಿತಥ', 'ಕೊನೆ', 'ವೇಷಗಳು', 'ಮಸೀದಿ ಬಿದ್ದ ಮೂರನೇ ದಿನ', 'ಆಕ್ರಮಣ', 'ಹೆಣದ ಮನೆಯಲ್ಲಿ', 'ಪರಿಚಯ', 'ಮೈಕು'). ಈ ಸಂಕಲನದಲ್ಲಿ ಭಾವನೆಗಳ ಆರ್ದ್ರತೆಯಲ್ಲಿ ಚಿತ್ರಿಸಿದ ಕಥೆಗಳು ಇವೆ, ನಿರೀಂದ್ರಿಯ ಸ್ಥಿತಿಯ ಕಥೆಗಳೂ ಇವೆ. ಇವುಗಳಿಗೆ ಸಂಪೂರ್ಣ ತದ್ವಿರುದ್ಧವಾದ ರೋಮ್ಯಾಂಟಿಕ್ ಶೈಲಿಯ ಕಥೆಗಳೂ ಇದರಲ್ಲಿರುವುದು ಈ ಸಂಕಲನದ ವೈಶಿಷ್ಟ್ಯ.

೧೯೯೮ರಲ್ಲಿ ಬೆಳಗೆರೆಯವರು ತಮ್ಮ ಎರಡೂ ಕಥಾಸಂಕಲನದಲ್ಲಿಯ ಎಲ್ಲಾ ಕಥೆಗಳನ್ನು ಸೇರಿಸಿ 'ಭಾವನಾ ಪ್ರಕಾಶನ, ಬೆಂಗಳೂರು'ನಿಂದ **'ಒಟ್ಟಾರೆ ಕಥೆಗಳು'** ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ಹೆಚ್ಚುವರಿಯಾಗಿ ೩ ಕಥೆಗಳು ('ಹೀಗೊಬ್ಬಳು ಸೀತಾದೇವಿ', 'ಸತ್ಯಭಾಮೆಯ ತೆಕ್ಕೆಯಿಂದ', 'ನೆರಳು') ಸೇರ್ಪಡೆಯಾಗಿವೆ. ಈ ಎಲ್ಲಾ ಕಥೆಗಳೂ ೧೯೭೯ರಿಂದ ೧೯೯೮ರ ವರೆಗಿನ ಅವಧಿಯಲ್ಲಿ ಬರೆದ ಒಟ್ಟು ಕಥೆಗಳ ಮೊತ್ತವಾಗಿದೆ. ನಂತರದ ದಿನಗಳಲ್ಲಿ ಅಂದರೆ ಇದುವರೆಗೆ (೨೦೧೦ರ ವರೆಗೆ) ಕೇವಲ ೨ ಕಥೆಗಳನ್ನು ಮಾತ್ರ ಬರೆದಿದ್ದಾರೆ. ಅವು 'ಗಿಡ್ಡಾಂಜನೇಯ ಸ್ವಾಮಿ' ಹಾಗೂ 'ಬರುವನೇನೇ ಸಖಿ ಚೆಲುವ...'. ಈ ಕಥೆಗಳು ಕ್ರಮವಾಗಿ 'ಕನ್ನಡ ಪ್ರಭ:ದೀಪಾವಳಿ ವಿಶೇಷಾಂಕ–೨೦೦೮' ಮತ್ತು 'ಹಾಯ್ ಬೆಂಗಳೂರ್!' (ಸೃಷ್ಟಿ–೭೬೨, ಮೇ ೨೭, ೨೦೧೦) ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಈ ಕಥೆಗಳೂ ಸೇರಿದಂತೆ ೧೯೭೯ ರಿಂದ ೨೦೧೦ರ ವರೆಗಿನ ಈ ದೀರ್ಘ ಅವಧಿಯಲ್ಲಿ ರವಿ ಬೆಳಗೆರೆಯವರು ಬರೆದ ಒಟ್ಟು ಕಥೆಗಳು ಕೇವಲ–೨೩. ಈ ಕಥೆಗಳನ್ನು ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಸಂಖ್ಯಾ ದೃಷ್ಟಿಯಿಂದ ರವಿಯವರು ಬರೆದ ಕಥೆಗಳು ತುಂಬಾ ಕಡಿಮೆ ಎನಿಸಿದರೂ, ಕಥೆಗಳ ಪರಿಣಾಮಕಾರಿ ನಿರೂಪಣೆ, ಪಾತ್ರಗಳ ಪ್ರಬುದ್ಧತೆ, ವಸ್ತು ವೈವಿಧ್ಯತೆ ಇವೆಲ್ಲವೂ ಕಥೆಗಳ ಸತ್ವ, ಮೌಲ್ಯವನ್ನು ಹೆಚ್ಚಿಸಿವೆ.

ರವಿಯವರ ಕಥೆಗಳನ್ನು ಕುರಿತಂತೆ ಈವರೆಗೆ ೩ ವಿಮರ್ಶಾ ಲೇಖನಗಳು ಪ್ರಕಟವಾಗಿವೆ. ಕಥೆಗಾರ ಕೆ. ಸತ್ಯನಾರಾಯಣರವರು 'ಪಾ.ವೆಂ. ಹೇಳಿದ ಕಥೆ' ಕಥಾ ಸಂಕಲನಕ್ಕೆ ವಿಮರ್ಶಾತ್ಮಕ ಮುನ್ನುಡಿ ಬರೆದಿದ್ದಾರೆ. ಹಾಗೂ 'ರುಜುವಾತು' (ಜುಲೈ–ಸೆಪ್ಟೆಂಬರ್: ೧೯೯೫) ತ್ರೈಮಾಸಿಕ ಪತ್ರಿಕೆಯಲ್ಲಿ ಜಿ. ರಾಜಶೇಖರ್ ಅವರು ಇದೇ ಕಥಾ ಸಂಕಲನದ ಕಥೆಗಳನ್ನು ಕುರಿತು ವಿಮರ್ಶಾ ಲೇಖನವನ್ನು ಬರೆದಿದ್ದಾರೆ. ಡಾ. ಬಂಜಗೆರೆ ಜಯಪ್ರಕಾಶ್‌ರವರು 'ಒಟ್ಟಾರೆ ಕಥೆಗಳು' ಕಥಾಸಂಕಲನವನ್ನು ಕುರಿತು ತಮ್ಮ 'ಉಲಿಯ ಉಯ್ಯಲೆ' ಲೇಖನ ಸಂಕಲನ ಕೃತಿಯಲ್ಲಿ ಬರೆದಿದ್ದಾರೆ. ಈ ಮೂರು ವಿಮರ್ಶಾ ಲೇಖನಗಳನ್ನು ಕೂಡಾ ಈ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ರವಿಯವರ 'ದಾರಿ' ಕಥಾ ಸಂಕಲನವನ್ನು ಕುರಿತು ಇದುವರೆಗೆ ಯಾವುದೇ ವಿಮರ್ಶೆಗಳು ಪ್ರಕಟವಾಗಿಲ್ಲ.

## ಅಧ್ಯಯನದ ವಿಧಾನ

'ರವಿ ಬೆಳಗೆರೆ ಅವರ ಕಥೆಗಳು: ಸಾಹಿತ್ಯಿಕ ವಿಶ್ಲೇಷಣೆ' ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನವನ್ನು ಕೈಗೊಂಡಿದ್ದು, ಅಧ್ಯಯನದ ಅನುಕೂಲಕ್ಕಾಗಿ ಒಟ್ಟು ೭ ಅಧ್ಯಾಯಗಳನ್ನಾಗಿ ವಿಭಾಗಿಸಲಾಗಿದೆ. ಈ ಅಧ್ಯಾಯಗಳ ಮೂಲಕ ಪ್ರಸ್ತುತ ಅಧ್ಯಯನ ಮಾಡಲಾಗಿದೆ.

ಅಧ್ಯಾಯ–೧ರಲ್ಲಿ ರವಿ ಬೆಳಗೆರೆ ಅವರ ಕಥೆಗಳ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನವನ್ನು ಕುರಿತು ವಿವರಿಸಲಾಗುವುದು.

ಅಧ್ಯಾಯ–೨ರಲ್ಲಿ ರವಿ ಬೆಳಗೆರೆಯವರ ಕಥೆಗಳನ್ನು ಕುರಿತಂತೆ ಇದುವರೆಗೆ ಪ್ರಕಟಗೊಂಡ ವಿಮರ್ಶಾ ಲೇಖನಗಳನ್ನು ಚರ್ಚಿಸಲಾಗುವುದು.

ಅಧ್ಯಾಯ–೩ರಲ್ಲಿ ರವಿ ಬೆಳಗೆರೆಯವರ ಕಥೆಗಳ ಕಥಾವಸ್ತು ಮತ್ತು ಭಾಷೆಯ ಬಗ್ಗೆ ವಿಶ್ಲೇಷಣೆ ಮಾಡಲಾಗುವುದು

ಅಧ್ಯಾಯ–೪ರಲ್ಲಿ ರವಿ ಬೆಳಗೆರೆಯವರ ಕಥೆಗಳಲ್ಲಿನ ಪಾತ್ರಗಳ ಚಿತ್ರಣವನ್ನು ಕುರಿತು ವಿವರಿಸಲಾಗುವುದು.

ಅಧ್ಯಾಯ–೫ರಲ್ಲಿ ರವಿ ಬೆಳಗೆರೆಯವರ ಕಥೆಗಳ ಕಥನ ಕ್ರಮವನ್ನು ಕುರಿತು ವಿಶ್ಲೇಷಿಸ ಲಾಗುವುದು.

ಅಧ್ಯಾಯ–೬ರಲ್ಲಿ ಅಧ್ಯಯನದ ಫಲಿತಗಳನ್ನು ವಿವರಿಸಲಾಗುವುದು.

ಅಧ್ಯಾಯ–೭ರಲ್ಲಿ ಇಡೀ ಅಧ್ಯಯನದ ಸಮಾರೋಪವನ್ನು ಹೇಳಲಾಗಿದೆ.

**ಅನುಬಂಧ**ದಲ್ಲಿ: ರವಿ ಬೆಳಗೆರೆಯವರ ಸಂಕ್ಷಿಪ್ತ ಪರಿಚಯ, ಪ್ರಕಟಿತ ಕೃತಿಗಳು, ಪ್ರಶಸ್ತಿ ಪುರಸ್ಕಾರಗಳು, ಗ್ರಂಥಋಣ ಇತ್ಯಾದಿ ಹೆಚ್ಚುವರಿ ವಿಷಯ ವಿವರಗಳನ್ನು ಅಳವಡಿಸಲಾಗುವುದು.

## ಕೊನೆ ಟಿಪ್ಪಣಿ

೧. ನಾಗತಿಹಳ್ಳಿ ಚಂದ್ರಶೇಖರ್, ನನ್ನ ಪ್ರೀತಿಯ ಹುಡುಗಿಗೆ (ಅಂಕಣ ಬರಹಗಳ ೩ನೇ ಸಂಪುಟ) ಅಭಿವ್ಯಕ್ತಿ: ಒಂದು ಸಾಂಸ್ಕೃತಿಕ ವೇದಿಕೆ, ಬೆಂಗಳೂರು, ೨೦೦೪, (ಮುನ್ನುಡಿ)



## ಅಧ್ಯಾಯ ೨

# ಇದುವರೆಗಿನ ವಿಮರ್ಶೆಗಳ ಅವಲೋಕನ

ರವಿ ಬೆಳಗೆರೆಯವರ ಕಥೆಗಳನ್ನು ಕುರಿತಂತೆ ಇದುವರೆಗೆ ಕೇವಲ ೩ ವಿಮರ್ಶಾ ಲೇಖನಗಳು ಪ್ರಕಟವಾಗಿವೆ. ಅವುಗಳನ್ನೇ ಇಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ರವಿಯವರ 'ಪಾ.ವೆಂ ಹೇಳಿದ ಕಥೆ' ಕಥಾ ಸಂಕಲನಕ್ಕೆ ಕಥೆಗಾರ 'ಕೆ. ಸತ್ಯನಾರಾಯಣ'ರವರು ವಿಮರ್ಶಾತ್ಮಕ ಮುನ್ನುಡಿಯನ್ನು ಬರೆದಿದ್ದಾರೆ. ಹಾಗೂ 'ರುಜುವಾತು' ತ್ರೈಮಾಸಿಕ ಪತ್ರಿಕೆ (ಜುಲೈ–ಸೆಪ್ಟೆಂಬರ್:೧೯೯೫)ಯಲ್ಲಿ 'ಜಿ. ರಾಜಶೇಖರ'ರವರು ಇದೇ ಸಂಕಲನದ ಕಥೆಗಳನ್ನು ಕುರಿತು ವಿಮರ್ಶಾ ಲೇಖನವನ್ನು ಬರೆದಿದ್ದಾರೆ. 'ಡಾ. ಬಂಜಗೆರೆ ಜಯಪ್ರಕಾಶ'ರವರು 'ಒಟ್ಟಾರೆ ಕಥೆಗಳು' ಕಥಾಸಂಕಲನವನ್ನು ಕುರಿತು ತಮ್ಮ ಲೇಖನ ಸಂಕಲನ ಕೃತಿ 'ಉಲಿಯ ಉಯ್ಯಲೆ'ಯಲ್ಲಿ ವಿಮರ್ಶಾ ಲೇಖನವನ್ನು ಬರೆದಿದ್ದಾರೆ. (ಇದಕ್ಕೂ ಮೊದಲು ಈ ಲೇಖನ ಶ್ರೀಧರ್ ಅವರ ಸಂಪಾದಕತ್ವದ 'ಅಗ್ನಿ' ವಾರಪತ್ರಿಕೆಯಲ್ಲಿ ಮಾರ್ಚ್, ೧೯೯೯ರಲ್ಲಿ ಪ್ರಕಟಗೊಂಡಿದೆ) 'ದಾರಿ' ಕಥಾಸಂಕಲನದ ಕಥೆಗಳನ್ನು ಕುರಿತು ಇದುವರೆಗೆ ಯಾವುದೇ ವಿಮರ್ಶೆಗಳು ಪ್ರಕಟವಾಗಿಲ್ಲ. ಈ ಮೊದಲೇ ತಿಳಿಸಿದಂತೆ ವಿಮರ್ಶಕರ ನಿರ್ಲಕ್ಷ್ಯಕ್ಕೆ ಇವರ ಕಥೆಗಳು ಒಳಗಾಗಿರುವುದರಿಂದ ಹೆಚ್ಚಿನ ಮಟ್ಟದ ವಿಮರ್ಶೆಗಳು ಪ್ರಕಟವಾಗಿಲ್ಲ. ಹೀಗಾಗಿ ಈ ಮೇಲಿನ ಮೂರೂ ವಿಮರ್ಶಾ ಲೇಖನಗಳನ್ನು ಈ ಕೆಳಗೆ ಚರ್ಚಿಸಲಾಗಿದೆ.

ರವಿ ಬೆಳಗೆರೆಯವರ 'ಪಾ.ವೆಂ. ಹೇಳಿದ ಕಥೆ' ಕಥಾಸಂಕಲನವನ್ನು ಕುರಿತಂತೆ ಕೆ. ಸತ್ಯನಾರಾಯಣ ಹಾಗೂ ಜಿ. ರಾಜಶೇಖರರವರು ಮೌಲ್ಯ ವಿವೇಚನೆಯುಳ್ಳ ವಿಮರ್ಶಾ ಲೇಖನವನ್ನು ಬರೆದಿದ್ದರೂ, ಕೆಲವೊಂದು ಅಂಶಗಳು ಇದರಲ್ಲಿ ಚರ್ಚೆಯಾಗದೇ ಉಳಿದಿವೆ. ಈ ಎರಡೂ ವಿಮರ್ಶಾ ಲೇಖನಗಳಲ್ಲಿ ಕಥಾಸಂಕಲನದ ಎಲ್ಲಾ ಕಥೆಗಳನ್ನು ವಿಮರ್ಶಿಸಿಲ್ಲ. ಕೆಲವು ಕಥೆಗಳ ಬಗ್ಗೆ ಇಲ್ಲಿ ಚರ್ಚೆಯೇ ಆಗಿಲ್ಲ. ಇನ್ನು ಕೆಲವು ಕಥೆಗಳನ್ನು ಒಂದೇ ಸಾಲಿನಲ್ಲಿ ವಿಮರ್ಶಿಸಿ ಷರಾ ಬರೆಯಲಾಗಿದೆ. ಕೆಲವನ್ನು ತೀರಾ ಸಂಕ್ಷಿಪ್ತವಾಗಿ ವಿಮರ್ಶಿಸಲಾಗಿದೆ.

ಕೆ. ಸತ್ಯನಾರಾಯಣರ ಲೇಖನದಲ್ಲಿ 'ಮಿನಾರುಗಳ ಊರಿನಲ್ಲಿ ಅವರು', 'ವೇಷಗಳು', 'ವಿತಥ', 'ಭ್ರೂಣ ಸಂಭಾಷಣೆ', 'ಮಸೀದಿ ಬಿದ್ದ ಮೂರನೇ ದಿನ', 'ಪಾ.ವೆಂ. ಹೇಳಿದ ಕಥೆ' ಈ ಕಥೆಗಳ ಬಗ್ಗೆ ವ್ಯಾಪಕ ಚರ್ಚೆ ಮಾಡಿದ್ದಾರೆ. ಆದರೆ 'ಕೊನೆ', 'ಹೆಣದ ಮನೆಯಲ್ಲಿ', 'ವಂಧ್ಯಾ', 'ಆಕ್ರಮಣ', 'ಕುಹು ಕುಹರ', 'ಪರಿಚಯ' ಈ ಕಥೆಗಳನ್ನು ತುಂಬಾ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. 'ಮೈಕು' ಕಥೆಯನ್ನು ಈ ಲೇಖನದಲ್ಲಿ ಸಂಪೂರ್ಣವಾಗಿ ಕೈಬಿಟ್ಟಿದ್ದಾರೆ.

೧೯೮೦ರಲ್ಲಿ ಪ್ರಕಟವಾದ 'ದಾರಿ' ಕಥಾಸಂಕಲನದಲ್ಲಿಯ 'ಶಾಲಿನಿ' ಕಥೆ ಹಾಗೂ ೧೯೯೬ರಲ್ಲಿ ಪ್ರಕಟವಾದ 'ಪಾ.ವೆಂ. ಹೇಳಿದ ಕಥೆ' ಕಥಾಸಂಕಲನದಲ್ಲಿಯ 'ಮಿನಾರುಗಳ ಊರಿನಲ್ಲಿ ಅವರು' ಈ ಕಥೆಯೊಡನೆ ಹೋಲಿಸಿ ನೋಡಿದ್ದಾರೆ. ಎರಡರಲ್ಲಿಯೂ ದಾಂಪತ್ಯವೇ ಕಥಾ ವಸ್ತುವಾಗಿದ್ದರೂ ಕಥೆಗಾರರ ಮನೋಧರ್ಮದಲ್ಲಿ ಆಗಿರುವ ಬದಲಾವಣೆಯನ್ನು ಇಲ್ಲಿ ಗುರುತಿಸಿದ್ದಾರೆ. ಈ ಬದಲಾವಣೆಯ ಸ್ವರೂಪವನ್ನು ಸ್ವಾಗತಿಸುತ್ತಾ ಇದು ಕಥೆಯ ಪ್ರಬುದ್ಧತೆಗೆ ಸಹಕಾರಿ ಎಂದಿದ್ದಾರೆ. ಆದರೆ ರವಿಯವರ ಎಲ್ಲಾ ಕಥೆಗಳಲ್ಲೂ ಮಾಗಿದ ಜೀವನ ದೃಷ್ಟಿಕೋನ, ಪ್ರಬುದ್ಧತೆ ಇದೆ ಎಂದು ಒಪ್ಪುವುದಿಲ್ಲ. 'ಪಾ.ವೆಂ. ಹೇಳಿದ ಕಥೆ', 'ಮಸೀದಿ ಬಿದ್ದ ಮೂರನೇ ದಿನ', 'ಭ್ರೂಣ ಸಂಭಾಷಣೆ', 'ವಿತಥ', 'ಕೊನೆ' ಈ ಕಥೆಗಳು ಕಥೆಗಾರನ ಬದಲಾದ ದೃಷ್ಟಿಕೋನವನ್ನು ಸೂಚಿಸಿದರೆ ಉಳಿದವು ಈ ದೃಷ್ಟಿಕೋನವನ್ನು ತಲುಪಲು ಕಥೆಗಾರ ನಡೆದು ಬಂದ ಹಾದಿಯನ್ನೂ, ಹಾದಿಯಲ್ಲಿರುವ ಕಷ್ಟವನ್ನು ಸೂಚಿಸುತ್ತವೆ ಎಂದಿದ್ದಾರೆ. ಆದರೆ ರವಿಯವರ ಮೊದಲ ಕಥಾ ಸಂಕಲನ 'ದಾರಿ'ಯಲ್ಲಿನ ಎಲ್ಲಾ ಕಥೆಗಳನ್ನು ಈ ವರ್ಗಕ್ಕೆ ಸೇರಿಸಲಾಗುವುದಿಲ್ಲ. 'ಬದುಕೊಂದು ಸತತ ಅಭ್ಯಾಸ', 'ಕತ್ತಲೆ ನೋವು ಮತ್ತು ಹೆಣ' ಈ ಕಥೆಗಳು ಕಥೆಗಾರರ ಪ್ರಬುದ್ಧತೆಗೆ ಸಾಕ್ಷಿಯಾಗಿವೆ. ಇದರ ಜೊತೆಗೆ 'ಪಾ.ವೆಂ. ಹೇಳಿದ ಕಥೆ' ಕಥಾಸಂಕಲನದಲ್ಲಿಯ 'ವೇಷಗಳು', 'ಆಕ್ರಮಣ', 'ವಂಧ್ಯಾ' ಕಥೆಗಳನ್ನು ಗಮನಿಸಬಹುದು.

'ಮಿನಾರುಗಳ ಊರಿನಲ್ಲಿ ಅವರು' ಕಥೆಯಲ್ಲಿನ ಗಂಡು ಹೆಣ್ಣಿನ ಸಂಬಂಧ, ಜೀವನದಲ್ಲಿ ಕಾಮದ ಸ್ಥಾನ ಈ ವಿಷಯಗಳ ಬಗ್ಗೆ ಕಥೆಗಾರನಿಗಿರುವ ಪ್ರಬುದ್ಧತೆ, ಜೀವಂತಿಕೆಯ ಧೋರಣೆಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾ ಹೊಸ ತಲೆಮಾರಿನ ಲೇಖಕರ ಈ ವಸ್ತುವಿನ ಅಭಿವ್ಯಕ್ತಿಗೆ ಹೋಲಿಕೆಯಾಗಿ ಹಿರಿಯ ಕಾದಂಬರಿಕಾರರಾದ ಶಾಂತಿನಾಥ ದೇಸಾಯಿ, ಎಸ್.ಎಲ್. ಭೈರಪ್ಪನವರ ಕಾದಂಬರಿಗಳನ್ನು ಉದಾಹರಿಸಿದ್ದಾರೆ. ಇದು ಕಥೆಗಳ ಉತ್ಕೃಷ್ಟತೆಯನ್ನು ವ್ಯಕ್ತಪಡಿಸುತ್ತದೆಯಾದರೂ ಇಲ್ಲಿ ಕೇವಲ 'ಮಿನಾರುಗಳ ಊರಿನಲ್ಲಿ ಅವರು' ಕಥೆಯನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ಹೇಳಿದ್ದಾರೆ. ಆದರೆ ಬೆಳಗೆರೆಯವರ ಬಹುತೇಕ ಕಥೆಗಳಲ್ಲಿ ಗಂಡು ಹೆಣ್ಣಿನ ಸಂಬಂಧ, ಪ್ರೇಮ-ಕಾಮಗಳ ತಾಕಲಾಟಗಳೇ ವಿಜೃಂಭಿಸಿರುವುದನ್ನು ಕಾಣಬಹುದು.

ಲೇಖಕರ ದೃಷ್ಟಿಯಲ್ಲಾಗುವ ಬೆಳವಣಿಗೆ ಅಥವಾ ಬದಲಾವಣೆ ನಮಗೆ ಇಷ್ಟವಾದರೂ ಕಥೆಯನ್ನು ಓದುವಾಗ ಈ ಲೇಖಕ ಕಷ್ಟವನ್ನು ಎಷ್ಟು ಆಕರ್ಷಕವಾಗಿ, ಎಷ್ಟು ರೋಮ್ಯಾಂಟಿಕ್ ಆಗಿ ನೋಡಬಲ್ಲರು ಎಂದು ತಮ್ಮ ಅನಿಸಿಕೆ ವ್ಯಕ್ತಪಡಿಸಿದ್ದಾರೆ. ಆದರೆ ಇದೇ ಲೇಖನದ ಪ್ರಾರಂಭದಲ್ಲಿ 'ರವಿಯವರ ಕಥೆಗಳಲ್ಲಿ ಆಕರ್ಷಕವಾಗಿ ಬರೆಯುವ ಆಸೆ, ಜ್ಞಾನದಾತುರದಂತಹ ಯಾವ ಅಂಶಗಳೂ ಈ ಕಥೆಗಳಲ್ಲಿ ಕಾಣುವುದಿಲ್ಲ' ಎಂದಿರುವುದನ್ನೂ ಇಲ್ಲಿ ಗಮನಿಸಬಹುದು. ಈ ಎರಡೂ ಹೇಳಿಕೆಗಳು ಪರಸ್ಪರ ವೈರುಧ್ಯದಿಂದ ಕೂಡಿವೆ. ಬೆಳಗೆರೆಯವರ ಕಥೆಗಳಲ್ಲಿ ಆಕರ್ಷಕ ಬರವಣಿಗೆ ಕಂಡುಬರುತ್ತದೆಯೋ? ಅಥವಾ ಇಲ್ಲವೋ? ಎಂಬುದು ಇಲ್ಲಿ ವಿಮರ್ಶಕರು ಸ್ಪಷ್ಟಪಡಿಸಿಲ್ಲ. ಮುಂದುವರಿದು, 'ಕಥೆಗಾರ ಕಷ್ಟವನ್ನು ಆಕರ್ಷಕವಾಗಿ, ರೋಮ್ಯಾಂಟಿಕ್ ಆಗಿ ನೋಡುವುದರಿಂದ ಕಥೆಗಳಿಗೆ ಆತ್ಮಾನುಕಂಪದ ಛಾಯೆ ಬಂದು ಬಿಟ್ಟಿದೆ. ರವಿ ಏಕೆ ಹೀಗೆ ಮಾಡಿದರು? ಬರವಣಿಗೆ ಆಕರ್ಷಕವಾಗಿರಲೆಂಬ ಆಸೆಯಿಂದಲೇ?' ಎಂಬ ಗೊಂದಲ ಇಲ್ಲಿ ವಿಮರ್ಶಕರನ್ನು ಕಾಡಿದೆ.

'ಹೆಣದ ಮನೆಯಲ್ಲಿ', 'ಆಕ್ರಮಣ', 'ವಂಧ್ಯಾ', 'ಕುಹು ಕುಹರ', 'ಪರಿಚಯ' ಈ ಕಥೆಗಳಲ್ಲಿನ ಕಷ್ಟಗಳ ನಿರೂಪಣೆ, ವಿಕೃತ ಬಡತನದ ಬಗ್ಗೆ ಲೇಖಕರ ಗ್ರಹಿಕೆಯಲ್ಲಿರುವ ನಿಖರತೆಯ ಬಗ್ಗೆ ಹುಡುಕಾಟ ನಡೆಸಿದ್ದಾರೆ. ಇದು 'ವಂಧ್ಯಾ' ಮತ್ತು 'ಹೆಣದ ಮನೆಯಲ್ಲಿ' ಕಥೆಗಳನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ಹೇಳಿರುವಂತಿದೆ. 'ಆಕ್ರಮಣ', 'ಕುಹು ಕುಹರ', 'ಪರಿಚಯ' ಈ ಕಥೆಗಳಲ್ಲಿ ವಿಮರ್ಶಕರು ಕೇವಲ ನಿರೀಂದ್ರಿಯ ಸ್ಥಿತಿಯ ಬಗ್ಗೆ ಆಸಕ್ತಿ ತೋರಿದ್ದಾರೆ. ಈ ಕಥೆಗಳಲ್ಲಿ ಸ್ಥಿತಿಯೇ ಸರ್ವಸ್ವ ಎಂದು ಹೇಳಿದ್ದಾರೆ. ಆದರೆ ಆ ಸ್ಥಿತಿಯಾಚೆಗೆ ಇರುವ ಅಂಶಗಳನ್ನು ಇಲ್ಲಿ ಪರಿಗಣನೆಗೆ ತೆಗೆದುಕೊಂಡಿಲ್ಲ.

ಉದಾ: 'ಆಕ್ರಮಣ' ಕಥೆಯ ನಾಯಕನ ವಿಪರೀತ ಎನ್ನುವಷ್ಟು ಅಂತರ್ಮುಖಿತನ, ಸ್ನೇಹಿತನ ವಂಚನೆ, ಹೆಂಡತಿಯ ಅನೈತಿಕ ಸಂಬಂಧ ಇವೆಲ್ಲವನ್ನು ಮೌನವಾಗಿ ಸಹಿಸುವ ಕಥಾನಾಯಕನ ಮನಸ್ಥಿತಿ, ಬಯಲಾಗುವ ನಗ್ನ ಸತ್ಯಗಳಿಗೆ ಅವನು ತೋರುವ ನಿರ್ಲಿಪ್ತತೆ ಇವೆಲ್ಲವದರ ಬಗೆಗಿನ ವಿಮರ್ಶಾತ್ಮಕ ವಿಶ್ಲೇಷಣೆಯನ್ನು ಇಲ್ಲಿ ಕಾಣಲಾಗುವುದಿಲ್ಲ. ಇನ್ನು 'ಪರಿಚಯ' ಕಥೆಯ ನಾಯಕ ಕಥೆಗಾರ ಶ್ರೀವತ್ಸ ಕೂಡಾ 'ಆಕ್ರಮಣ' ಕಥಾನಾಯಕನ ಮನೋಸ್ಥಿತಿಯನ್ನು ಹೊಂದಿರುವವನು, 'ಆಕ್ರಮಣ' ಕಥೆಯಲ್ಲಿ ಕಥಾನಾಯಕನಿಗೆ ತನ್ನ ಮಗುವಿನ ನಿಜವಾದ ತಂದೆ ಯಾರು? ಎಂಬ ಜನ್ಮ ರಹಸ್ಯ ಗೊತ್ತಾದರೂ ನಿರ್ಲಿಪ್ತತೆಯಿಂದ ಇರುತ್ತಾನೆ. ಆದರೆ 'ಪರಿಚಯ' ಕಥೆಯಲ್ಲಿ ಕಥಾನಾಯಕ ತನ್ನದೇ ಜನ್ಮರಹಸ್ಯವನ್ನು ಕಂಡುಕೊಳ್ಳುತ್ತಾನೆ. ಇದುವರೆಗೂ ತಾನು ಅಂದುಕೊಂಡಂತೆ ತಾಯಿಯ ಗಂಡ ತನ್ನ ಅಪ್ಪನಲ್ಲ ಎಂಬ ರಹಸ್ಯ ಇಲ್ಲಿ ಬಯಲಾಗುತ್ತದೆ. ಇಂತಹ ಸೂಕ್ಷ್ಮ ವಿಷಯಗಳ ಬಗೆಗಿನ ಚರ್ಚೆಯನ್ನು ಇಲ್ಲಿ ಸತ್ಯನಾರಾಯಣರು ಕೈ ಬಿಟ್ಟಿದ್ದಾರೆ. 'ಕುಹು ಕುಹರ' ಕಥೆಯಲ್ಲಿ ನಿರೀಂದ್ರಿಯತೆ ಸ್ಥಿತಿಯ ಬಗ್ಗೆಯೇ ಪ್ರಸ್ತಾಪಿಸಿದ್ದಾರೆ. ಇದರ ಆಚೆಗಿನ ಪೀಟರ್ ಸಾಲಮನ್, ಸುಬ್ಬಯ್ಯ ಅವರೊಂದಿಗೆ ಸೇರಿದ ಕಲಾವಿದನ ವಿಕ್ಷಿಪ್ತ ಬದುಕಿನ ಚಿತ್ರಣ, ಪೀಟರ್

ಸಾಲಮನ್‌ನ ಹೆಂಡತಿ ಮೈ ಮಾರಿಕೊಳ್ಳುವ ಹೆಂಗಸಾಗಿದ್ದರೂ ಕಲಾವಿದನಡೆಗೆ ಅವಳಿಗಿರುವ ಪ್ರೀತಿ, ಅಂತಃಕರಣ ಇವೆಲ್ಲದರ ಪ್ರಸ್ತಾಪ ಇಲ್ಲಿಲ್ಲ.

'ಆಕ್ರಮಣ', 'ಪರಿಚಯ', ಕುಹು ಕುಹರ' ಈ ಕಥೆಗಳ ನಾಯಕರ ಮನಸ್ಥಿತಿಯೇ ನಿರೀಂದ್ರಿಯತೆಯ ಸ್ಥಿತಿ. ಈ ಕಥೆಗಳ ಸ್ವರೂಪವನ್ನು ತಿಳಿಯಲು 'ಕುಸುಮಾಕರ ದೇವರಗೆಣ್ಣೂರ'ರ 'ನಿರೀಂದ್ರಿಯ' ಕಾದಂಬರಿಯೊಡನೆ ಇಲ್ಲಿನ ಕಥೆಗಳನ್ನು ಇಟ್ಟು ನೋಡಬಹುದು ಎಂದಿದ್ದಾರೆ. ಕುಸುಮಾಕರರ 'ನಿರೀಂದ್ರಿಯ' ಕಾದಂಬರಿಯ ನಾಯಕ 'ರೊಳ್ಳಿ'ಯ ಮನಸ್ಥಿತಿಯೇ 'ಆಕ್ರಮಣ', 'ಪರಿಚಯ', 'ಕುಹು ಕುಹರ'ದ ಕಥಾನಾಯಕರಾದ್ದಾಗಿದೆ. ನಿರ್ಲಿಪ್ತತೆ, ಅಂತರ್ಮುಖಿಯತೆ, ನಿರ್ಮೋಹಿತನ ಇಂತಹ ಸ್ಥಿತಿಯೇ ಇಲ್ಲಿ ಕಥೆಯಾಗಿ ಮೂಡಿಬಂದಿದೆ. ತಮ್ಮ 'ನಿರೀಂದ್ರಿಯ' ಕಾದಂಬರಿಯನ್ನು ಕುರಿತಂತೆ ಕುಸುಮಾಕರ ದೇವರಗೆಣ್ಣೂರುರವರು ಮುನ್ನುಡಿಯಲ್ಲಿ "ಮೇಲು ನೋಟಕ್ಕೆ ಇದು ಅತೃಪ್ತ, ನಿವೃತ್ತ, ಭಯಗ್ರಸ್ತ ಮನೋರೋಗಿಯ ಚಿತ್ರಣ ಎನ್ನಿಸಬಹುದು. ಆದರೆ ಒಳನೋಟಕ್ಕೆ ಇದು ಸಾಫಲ್ಯವನ್ನು ಕಾಣದ ರಿಕ್ತ ಜೀವನದ ಸಮಗ್ರ ಚಿತ್ರಣ, ಭ್ರಮನಿರಸನ, ಭಯ, ಜಿಗುಪ್ಸೆ ಇವುಗಳಿಂದ ತತ್ತರಿಸಿದ ವ್ಯಕ್ತಿ, ಜೀವನದ ಮೌಲಿಕ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕದೇ ಅವುಗಳಿಂದ ಓಡಿ ಹೋಗುವ ಪ್ರಯತ್ನ ಮಾಡುತ್ತಾನೆ. ಬದುಕಿನಲ್ಲಿ ಇದಕ್ಕಿಂತ ದೊಡ್ಡ ದುರಂತ ಬೇರೊಂದಿಲ್ಲ"[9] ಎಂದು ಹೇಳಿದ್ದಾರೆ. ಈ ಕಾದಂಬರಿಯಲ್ಲಿ ಸ್ಥಿತಿಯೇ ಸರ್ವಸ್ವವಾಗಿ ಮೂಡಿದೆ. ನಾಯಕ 'ರೊಳ್ಳಿ'ಯ ಮಾನಸಿಕ ತೊಳಲಾಟ, ಅವನ ಹೆಂಡತಿ 'ವೃಂದಾ'ಳ ರಿಕ್ತ ಬದುಕು ಇವೆಲ್ಲಾ ಸಶಕ್ತವಾಗಿ ಚಿತ್ರಣಗೊಂಡಿದೆ. ಸತ್ಯನಾರಾಯಣರೇ ಹೇಳಿರುವಂತೆ ಇದು ಆಳಕ್ಕೆ ಕರೆದೊಯ್ಯುವ ಬರವಣಿಗೆ. ಬೆಳಗೆರೆಯವರ ಕಥೆಗಳಲ್ಲಿನ ನಿರೀಂದ್ರಿಯ ಸ್ಥಿತಿಯನ್ನು ಅದರ ಸ್ವರೂಪವನ್ನು ತಿಳಿಯಲು ಈ ಕಾದಂಬರಿಯನ್ನು ಉದಾಹರಣೆ ಕೊಟ್ಟಿದ್ದರೂ, ಇದಕ್ಕೂ ಮೊದಲು ಪ್ರಕಟವಾದ ಎಸ್.ಎಲ್. ಭೈರಪ್ಪನವರ 'ನಿರಾಕರಣ' ಕಾದಂಬರಿಯ 'ನರಹರಿ ರಾವ್' ಮತ್ತು 'ಅನ್ವೇಷಣ' ಕಾದಂಬರಿಯ 'ವಿಶ್ವ'ನ ಮನಸ್ಥಿತಿಯನ್ನು ಇಲ್ಲಿ ಹೋಲಿಕೆಯಾಗಿ ನೋಡಬಹುದು.

ಗಂಡು ಹೆಣ್ಣಿನ ಸಂಬಂಧದ ಬಗ್ಗೆ ತುಂಬಾ ರೋಮ್ಯಾಂಟಿಕ್ ಆಗಿ ಬರೆಯಬಲ್ಲ ರವಿಯವರು ಬದುಕಿನ ನಿರೀಂದ್ರಿಯತೆಯ ಬಗ್ಗೆಯೂ ಅಷ್ಟೇ ಆಕರ್ಷಣೆ ಇರುವುದನ್ನು ಕಂಡು ಸೋಜಿಗ ವ್ಯಕ್ತಪಡಿಸಿದ್ದಾರೆ. ವಿಮರ್ಶಕರ ಈ ಅಭಿಪ್ರಾಯಕ್ಕೆ ಪೂರಕವಾಗಿ 'ಆಕ್ರಮಣ', 'ಪರಿಚಯ', 'ವಿತಥ' ಈ ಕಥೆಗಳಲ್ಲಿ ನಿರೀಂದ್ರಿಯ ಸ್ಥಿತಿಯೇ ಕಥೆಯಾಗಿದ್ದರೆ, 'ಕೊನೆ', 'ಮಿನಾರುಗಳ ಊರಿನಲ್ಲಿ ಅವರು' ಈ ಕಥೆಗಳಲ್ಲಿ ಗಂಡು ಹೆಣ್ಣಿನ ಪ್ರೇಮದ ಅಭಿವ್ಯಕ್ತಿಯ ಬಗ್ಗೆ ತುಂಬಾ ರೋಮ್ಯಾಂಟಿಕ್ ಆಗಿ ಬರೆದಿರುವುದನ್ನು ಗಮನಿಸಬಹುದು. ಅಲ್ಲದೇ 'ದಾರಿ' ಕಥಾಸಂಕಲನದಲ್ಲಿಯ 'ಶಾಲಿನಿ', 'ಬದುಕೊಂದು ಸತತ ಅಭ್ಯಾಸ', 'ಒಟ್ಟಾರೆ ಕಥೆಗಳು' ಕಥಾಸಂಕಲನದಲ್ಲಿಯ 'ಹೀಗೊಬ್ಬಳು ಸೀತಾದೇವಿ', ಬರುವನೇನೆ ಸಖಿ ಚೆಲುವ...' (ಬಿಡಿ ಕಥೆ) ಈ ಕಥೆಗಳಲ್ಲಿ ಗಂಡು-ಹೆಣ್ಣಿನ ಪ್ರೀತಿ ಪ್ರೇಮದ ನವಿರಾದ ಭಾವನೆಗಳ ಆಳ

ಹರವುಗಳನ್ನು ವಿಸ್ತರಿಸಿರುವುದನ್ನು ಕಾಣಬಹುದು. ಸತ್ಯನಾರಾಯಣರವರು ಈ ಎರಡು ಬಗೆಯ ವಸ್ತು ವೈರುಧ್ಯಗಳನ್ನು ಗುರುತಿಸಿದ್ದರೂ, ಮೂರನೇಯದಾಗಿ ವಿಕೃತ ಬಡತನ, ಕಷ್ಟ ಬದುಕಿನ ಚಿತ್ರಣವನ್ನೊಳಗೊಂಡ ಕಥೆಗಳನ್ನು ಗುರುತಿಸಬಹುದು. ಅವುಗಳಲ್ಲಿ ಪ್ರಮುಖವಾಗಿ 'ವಂಧ್ಯಾ, ವೇಷಗಳು', 'ಹೆಣದ ಮನೆಯಲ್ಲಿ', 'ದಾರಿ' ಕಥಾ ಸಂಕಲನದಲ್ಲಿಯ 'ಕತ್ತಲೆ ನೋವು ಮತ್ತು ಹೆಣ', ಈ ಕಥೆಗಳ ಪೈಕಿ 'ವಂಧ್ಯಾ' ಕಥೆಯಲ್ಲಿ ಭೀಕರ ಬರಗಾಲದ ಚಿತ್ರಣವಿದ್ದರೆ, ಉಳಿದವುಗಳಲ್ಲಿ ಬಡತನ, ಕಷ್ಟದ ಜೀವನ ಅಕ್ಷರವಾಗಿ ಹರಿದಿದೆ.

"ವಸ್ತುಗಳ ಬಗ್ಗೆ, ಮನಸ್ಥಿತಿಗಳ ಬಗ್ಗೆ ಲೇಖಕನಾದವನಿಗೆ ಅದೆಷ್ಟು ದಿನ ಆಸಕ್ತಿಯಿರಲು ಸಾಧ್ಯ. ಏನಿದ್ದರೂ ಇವೆಲ್ಲವೂ ಲೇಖಕನಿಗೆ ಬದುಕಿನ ನಿಗೂಢತೆಯನ್ನು ತಿಳಿಯುವ ಸಾಧ್ಯತೆಗಳು ಅಷ್ಟೆ ಈ ನಿಗೂಢತೆಯನ್ನು ಹಚ್ಚಿಕೊಂಡು ಬರೆದ ಕಥೆಗಳು ಈ ಸಂಕಲನದಲ್ಲಿವೆ." ಎಂದಿದ್ದಾರೆ ವಿಮರ್ಶಕರು. ಆದರೆ ಯಾವ ಯಾವ ಕಥೆಗಳು ಎಂಬುದನ್ನು ಗುರುತಿಸಿಲ್ಲ. ರವಿಯವರ ಬಹುತೇಕ ಕಥೆಗಳಲ್ಲಿ ಈ ನಿಗೂಢತೆ ಕಾಣಿಸಿಕೊಳ್ಳುತ್ತದೆ. ಕೆಲವು ಕಥೆಗಳಲ್ಲಿ ನಿಗೂಢತೆ ಅನಾವರಣವಾದರೆ, ಇನ್ನು ಕೆಲವು ಕಥೆಗಳಲ್ಲಿ ನಿಗೂಢತೆ ನಿಗೂಢವಾಗಿಯೇ ಉಳಿಯುತ್ತದೆ. ಉದಾಹರಣೆಗೆ: 'ಆಕ್ರಮಣ' ಕಥೆಯ ನಾಯಕನ ಮಗುವಿನ ಜನ್ಮರಹಸ್ಯ, 'ಪರಿಚಯ' ಕಥಾನಾಯಕನ ಜನ್ಮ ರಹಸ್ಯ, 'ವೇಷಗಳು' ಕಥೆಯ ಮಗು ಅಂಜಪ್ಪನ ಜನ್ಮದ ರಹಸ್ಯ ಗೊತ್ತಿಲ್ಲದ ತಂದೆ ಸಿಮ್ಮಣ್ಣ, 'ಕೊನೆ' ಕಥೆಯ ಅನಿರೀಕ್ಷಿತ ಅಂತ್ಯ, 'ಮೈಕು' ಕಥೆಯ ಕಂಟ್ರೋಲ್ ರೂಂನ ಮೈಕ್‌ಗೂ ಲೌಡ್ ಸ್ಪೀಕರ್‌ಗೂ ಕನೆಕ್ಷನ್ ತಪ್ಪಿಸಲಾಗಿತ್ತು ಎಂಬ ಸತ್ಯ, 'ಭ್ರೂಣ ಸಂಭಾಷಣೆ' ಕಥೆಯ ಅಂತ್ಯದಲ್ಲಿ ಪ್ರತ್ಯಕ್ಷನಾಗುವ ನಿಗೂಢ ಫಕೀರ, 'ಒಟ್ಟಾರೆ ಕಥೆಗಳು' ಕಥಾಸಂಕಲನದಲ್ಲಿ 'ಹೀಗೊಬ್ಬಳು ಸೀತಾದೇವಿ' ಕಥೆಯಲ್ಲಿನ ಸೀತೆಯ ಮನಸ್ಥಿತಿ, 'ಸತ್ಯಭಾಮೆಯ ತೆಕ್ಕೆಯಿಂದ' ಕಥೆಯ ನಿಗೂಢ ಅಂತ್ಯ ಇವುಗಳನ್ನು ಗುರುತಿಸಬಹುದು. ಈ ಕಥೆಗಳ ಪೈಕಿ 'ಆಕ್ರಮಣ', 'ಪರಿಚಯ', 'ಕೊನೆ', 'ಹೀಗೊಬ್ಬಳು ಸೀತಾದೇವಿ', 'ಮೈಕು' ಈ ಕಥೆಗಳಲ್ಲಿ ನಿಗೂಢತೆಯ ಅನಾವರಣವಿದ್ದರೆ, 'ವೇಷಗಳು', 'ಭ್ರೂಣ ಸಂಭಾಷಣೆ', 'ಸತ್ಯಭಾಮೆಯ ತೆಕ್ಕೆಯಿಂದ' ಈ ಕಥೆಗಳಲ್ಲಿ ನಿಗೂಢತೆಯೇ ಅಂತ್ಯವಾಗಿದೆ. ಈ ನಿಗೂಢತೆಯನ್ನೇ ಒಳಗೊಂಡ ಮತ್ತೊಂದು ಕಥೆ 'ವಿತಥ'. ಈ ಕಥೆಯ ಫರಶೀಕಲ್ಲಿನ ಮೇಲೆ ಹಾವು ಮೂಡಿದ ಸಂಗತಿ, ಹಾಸಿಗೆ ಹಿಡಿದು ಮಲಗಿದ ಮುದುಕನ ಚೀರಾಟ, ಪಕ್ಕದ ಕಂಪೋಂಡಿನ ದ್ವಯಪಾವನ ಇವೆಲ್ಲವೂ ಕಥೆಗೆ ನಿಗೂಢತೆಯನ್ನು ತಂದು ಕೊಡುತ್ತವೆ. ಕೊನೆಗೆ ಅನಸೂಯ ಮುಟ್ಟಾಗುವ ಮೂಲಕ ಇಡೀ ಕಥೆಯ ನಿಗೂಢತೆ ಕೇವಲ ಅನಸೂಯಳ ಭ್ರಮಿತ ಮನಸ್ಸಿನ ಕಲ್ಪನೆಗಳು ಎಂಬುದು ಸ್ಪಷ್ಟವಾಗುತ್ತದೆ.

'ವೇಷಗಳು' ಕಥೆಯನ್ನು ಕುರಿತಂತೆ ವಿಮರ್ಶಕರು ಇಲ್ಲಿ ಕಥೆಯೊಳಗಿನ ಶಿವಿ–ಬಸಪ್ಪರ ಬದಲಾಗುವ ಬದುಕು, ಬಡತನ, ಅಂಜಪ್ಪ ಮಗುವಿನ ಬವಣೆ ಇವುಗಳ ಬಗ್ಗೆ ಚರ್ಚಿಸಿದ್ದರೂ ಶಿವಿಯ ತಾಯ್ತನದ ಚಿತ್ರಣದ ಬಗ್ಗೆ ಗುರುತಿಸಿಲ್ಲ. ಈ ಕಥೆಯ ವಿಚಿತ್ರ ಕೂಸು ಅಂಜಪ್ಪ ಶಿವಿ ಬಯಸಿ ಪಡೆದ ಸಂತಾನವಲ್ಲ. ಅದು ಸಿಮ್ಮಣ್ಣನ ಬಲತ್ಕಾರದ

ಫಲ. ಕೋತಿಯನ್ನು ಹೋಲುವ, ಬುದ್ಧಿಮಾಂದ್ಯ, ವಿಕಾರಿ ಕೂಸು ಅಂಜಪ್ಪ. ಆದರೂ ಆ ಮಗುವಿಗೆ ಅವಳು ತೋರಿಸುವ ಪ್ರೀತಿ, ಮುಚ್ಚಟೆಯಿಂದ ಮಾಡುವ ಅಲಂಕಾರ, ಕಾಳಜಿ ಇವೆಲ್ಲದರಲ್ಲೂ ಶಿವಿಯ ಮಾತೃತ್ವ ಚಿತ್ರಣಗೊಂಡಿದೆ. 'ಭ್ರೂಣ ಸಂಭಾಷಣೆ' ಕಥೆಯನ್ನು ಹೊರತು ಪಡಿಸಿದರೆ ತಾಯ್ತನದ ಚಿತ್ರಣ ಪರಿಣಾಮಕಾರಿಯಾಗಿ ಮೂಡಿಬಂದಿರುವುದು ಈ ಕಥೆಯಲ್ಲಿಯೇ.

ಭಾರತೀಯ ಇಂಗ್ಲಿಷ್ ಪತ್ರಕರ್ತ ಹಾಗೂ ಲೇಖಕ 'ಸರ್ದಾರ್ ಖುಷವಂತ್ ಸಿಂಗ್'ರ ಕಥೆಯೊಂದರ ಪ್ರೇರಣೆಯಿಂದ ರಚಿತವಾದ ಕಥೆ 'ಕೊನೆ'. ಇದನ್ನು ಕುರಿತು ಸತ್ಯನಾರಾಯಣರು ಇದೊಂದು ವಿಷಾದದ ಕಥೆಯೆಂದು ಗುರುತಿಸಿದ್ದಾರೆ. 'ಈ ಕಥೆಯ ನಿಗೂಢತೆಯನ್ನು ವಿವರಿಸಿಬಿಡುವ, ವಿವರಿಸಿ ಖುಷಿಪಡುವ ಆಸೆಗೆ ಒಳಗಾಗಿಬಿಟ್ಟಿದೆ. ಈ ಕಾರಣಕ್ಕೆ ಇರಬೇಕು, ಕಥೆ ಓದುವಾಗ ನಮ್ಮಲ್ಲಿ ಮೂಡುವ ವಿಷಾದ, ಓದಿನ ನಂತರ ಉಳಿಯುವುದಿಲ್ಲ' ಎಂದಿದ್ದಾರೆ. ಆದರೆ ಈ ತೀರ್ಮಾನವನ್ನು ಪೂರ್ತಿಯಾಗಿ ಒಪ್ಪಿಕೊಳ್ಳಲಾಗುವುದಿಲ್ಲ. 'ಕೊನೆ' ಇದೊಂದು ಲಘುವಾದ, ಖುಷಿ ಕೊಡುವ ಕಥೆಯಾಗಿ ಮೂಡಿಬಂದಿದೆ. ಈ ಕಥೆಯಲ್ಲಿ ಅನೇಕ ಸಂಭಾಷಣೆಗಳು ಲಘು ಹಾಸ್ಯದಿಂದ ಕೂಡಿರುವುದನ್ನು ಗಮನಿಸಬಹುದು. ಉದಾಹರಣೆಗೆ..., ಕಥಾನಾಯಕ ತನ್ನ ಪ್ರೇಮ ನಿವೇದನೆಯನ್ನು ದೇವರಲ್ಲಿ (ಜೀಸಸ್) ಮೊರೆಯಿಟ್ಟು ಪ್ರಾರ್ಥಿಸುವ ಪರಿ...

> "ಹೇ ಬೆತ್ಲೆಹ್ಯಾಮಿನ ಕರುಣೆಯೇ,
>
> ಅವಳ ಮೊಣಕಾಲ ನುಣುಪನ್ನು ನನ್ನ ನಿರುಪದ್ರವಕಾರಿ ತೋರುಬೆರಳಿನ ಮೊನೆಗೆ ಒಮ್ಮೆಯಾದರೂ ತಾಕಿ ಆನಂದಿಸುವ ಭಾಗ್ಯ ದೊರಕಿಸು. ಒಂದು ಮೊಣಕಾಲು ಸಾಕು. ಇನ್ನೊಂದು ಅವಳೇ ಚಾಚಿಯಾಳು (ಈ ಕರಾರು ಒಂದು ಕೆನ್ನೆಗೆ ಹೊಡೆದರೆ ಮತ್ತೊಂದು ಕೆನ್ನೆಗೆ ನೀಡೆಂಬ ನಿನ್ನ ಆಜ್ಞೆಗೆ ಪೂರಕವಾಗಿಯೇ ಇರುತ್ತದೆ.) ಕೇವಲ ಸಿಂಧಿಗಳು, ಫಾರಸಿಗಳು ಮತ್ತು ಒಬ್ಬೇ ಒಬ್ಬ ಕ್ರೈಸ್ತಳು ಇರುವ ಈ ಅಪಾರ್ಟ್‌ಮೆಂಟ್‌ನಲ್ಲಿ ಕನ್ನಡದ ಖ್ಯಾತ ಕಥೆಗಾರನೊಬ್ಬ ಮನೆಯ ಮುಂದೆ ನೇಂ ಪ್ಲೇಟೂ ಹಾಕಿಸಿಕೊಳ್ಳದೇ ಶ್ರೀಲಂಕಾ ನಿರಾಶ್ರಿತನಂತೆ ಬದುಕುತ್ತಿರುವಾಗ ಆ ಬಾಲಕಿ ನನ್ನೊಡನೆ ನಾಲ್ಕು ಮಾತಾದರೂ ಆಡುವಂತಹ ಸೀಕ್ವೆನ್ಸು ಉಂಟುಮಾಡು ಆಮೆನ್!"[೨]

ಇಂತಹ ಲಘು ಹಾಸ್ಯದ ಸಂಭಾಷಣೆ, ನಿರೂಪಣೆ ಕಥೆಯುದ್ದಕ್ಕೂ ಇರುವುದರಿಂದ ಇಲ್ಲಿ ವಿಷಾದ ಓದುಗನಲ್ಲಿ ಹುಟ್ಟುವುದಿಲ್ಲ. ಕಥೆಯ ಅಂತ್ಯ ಮಾತ್ರ ಅನಿರೀಕ್ಷಿತ. ಓದುಗನ ಊಹೆ ಮೀರಿ ತಿರುವನ್ನು ಪಡೆಯುತ್ತದೆ. ರವಿಯವರ ಒಟ್ಟಾರೆ ಕಥೆಗಳಲ್ಲಿಯೇ ಈ ಕಥೆ ತುಂಬಾ ವಿಭಿನ್ನವಾದ ಶೈಲಿಯಿಂದ, ವಸ್ತುವಿನಿಂದ ಗಮನ ಸೆಳೆಯುತ್ತದೆ. ಸತ್ಯನಾರಾಯಣರು ಗುರುತಿಸಿದಂತೆ ಈ ಕಥೆ ತುಂಬಾ ರೋಮ್ಯಾಂಟಿಕ್ ಆಗಿ ಮೂಡಿಬಂದಿದೆ. ಕಥೆಯ

ಅಂತ್ಯದಲ್ಲಿ ಕೊಂಚಮಟ್ಟಿಗಿನ ವಿಷಾದತೆ ಕಂಡುಬಂದರೂ ರೋಮ್ಯಾಂಟಿಕ್ ನಿರೂಪನೆಯ ದಟ್ಟತೆ, ತೀವ್ರತೆಯಲ್ಲಿ 'ವಿಷಾದತೆ' ಮಸುಕಾಗಿಬಿಡುತ್ತದೆ. ಓದುಗನಲ್ಲಿ ವಿಷಾದತೆಯ ಅರಿವು ಆಗದಷ್ಟು ರೋಮ್ಯಾಂಟಿಕ್‌ನ ನಿರೂಪಣೆ ಇಲ್ಲಿ ವಿಜೃಂಭಿಸಿದೆ.

ಇಬ್ಬರು ಗರ್ಭಿಣಿ ಹೆಂಗಸರ ನಡುವಿನ ಸಂಭಾಷಣೆಯ ಶೈಲಿಯಲ್ಲಿರುವ ಹಾಗೆ ಕಾಣುವ ಕಥೆ 'ಭ್ರೂಣ ಸಂಭಾಷಣೆ' ಈ ಕಥೆಯ ಅಂತ್ಯದಲ್ಲಿ ಅನಿರೀಕ್ಷಿತವಾಗಿ ಕಾಣಿಸಿಕೊಳ್ಳುವ ಕಬ್ಬಿಣದ ಬಳೆ ತೊಟ್ಟ ಫಕೀರನ ಬಗ್ಗೆ ಇಲ್ಲಿ ವಿಮರ್ಶಕರು ಗುರುತಿಸಿಲ್ಲ. ಫಕೀರನ ಪ್ರವೇಶ ಕಥೆಗೆ ಇನ್ನೊಂದು ತಿರುವನ್ನು ನೀಡುತ್ತದೆಯೇ? ಅಥವಾ ನೀಡಬಲ್ಲದೇ? ಎಂಬುದನ್ನು ವಿವರಿಸುವ, ವಿಶ್ಲೇಷಿಸುವ ಅಗತ್ಯವಿತ್ತು ಎನಿಸುತ್ತದೆ. ಅಮೀನಾಳ ಹೊಸ ಬದುಕಿನ (ಫಕೀರನೊಂದಿಗಿನ) ಆರಂಭದ ಸಾಂಕೇತಿಕವಾಗಿ ಫಕೀರನ ಪ್ರವೇಶ ಇಲ್ಲಿ ಬಂದಿರಬಹುದು ಎಂದು ಅನಿಸುತ್ತದೆ.

ಡಿಸೆಂಬರ್ ೬,೧೯೯೨ರಂದು ಅಯೋಧ್ಯೆಯಲ್ಲಿ ರಾಮಮಂದಿರವನ್ನು ಕಟ್ಟಬೇಕೆಂಬ ಸಂಕಲ್ಪದಿಂದ ದುಷ್ಟಶಕ್ತಿಗಳು ಅಲ್ಲಿದ್ದ 'ಬಾಬ್ರಿ ಮಸೀದಿ'ಯನ್ನು ಕೆಡವಿದ ಘಟನೆ ಹಾಗೂ ಅದರ ಪರಿಣಾಮ ಇವುಗಳಿಂದ ಪ್ರೇರಣೆಗೊಂಡು ರಚಿಸಿದ ಕಥೆ 'ಮಸೀದಿ ಬಿದ್ದ ಮೂರನೇ ದಿನ' ಅಯೋಧ್ಯೆಯಲ್ಲಿ ಚರಿತ್ರೆ ನಿರ್ಮಿಸುತ್ತೇವೆಂದು ಹೊರಟವರ ಹುಂಬ ಮನಸ್ಥಿತಿ, ಚರಿತ್ರೆ ನಿರ್ಮಾಣದ ಪ್ರಯತ್ನಗಳು ಗುರುಶಾಂತನಂಥವರ ಬದುಕನ್ನು ದುರಂತವಾಗಿ ಪ್ರವೇಶಿಸುವ ಬಗೆ ಇವೆಲ್ಲದರ ಬಗೆಗೂ ವಿಮರ್ಶಕರು ಹೇಳಿದ್ದರೂ 'ಕೊನೆಯಲ್ಲಿ ಬರುವ ಅತ್ತಾರನ ಸಾವು ಇದರಿಂದ ಕಥೆಗೆ ಹೊಸದಾಗಿ ಏನಾಯಿತು. ಕಥೆಯ ಪರಿಣಾಮವನ್ನೇ ಮನಸ್ಸಿನಲ್ಲಿಟ್ಟುಕೊಂಡು ಲೇಖಕರು ಹೀಗೆ ಅಂತ್ಯ ಮಾಡಿರಬೇಕು' ಎಂಬ ವಿಚಾರ ವ್ಯಕ್ತಪಡಿಸಿದ್ದಾರೆ. ಇಲ್ಲಿ ಅತ್ತಾರನ ಸಾವು ಕಥೆಗೆ ಹೊಸ ತಿರುವು ತರುವುದಿಲ್ಲ. ಆದರೆ ಈ ಸಾವು ಚರಿತ್ರೆಯ ನಿರ್ಮಾಣದ ಪರಿಣಾಮವಾಗಿದೆ ಎಂದಷ್ಟೇ ಹೇಳಬಹುದು.

ಮಾಸ್ತಿಯವರ ಕಥನ ಶೈಲಿಯನ್ನು ಹೋಲುವ 'ಪಾ.ವೆಂ. ಹೇಳಿದ ಕಥೆ'ಯ ಅಂಬುಜಾಳ ಪ್ರಬಲ ಇಚ್ಛಾಶಕ್ತಿಯ ಮನೋಧೃಡತೆ ಹಾಗೂ ಅವಳ ಗಂಡನ ದುರ್ಬಲ ಮನೋಸ್ಥಿತಿ ಈ ಎರಡು ವೈರುಧ್ಯ ವ್ಯಕ್ತಿತ್ವದ ಚಿತ್ರಣದ ಬಗ್ಗೆ ವಿಮರ್ಶಕರು ವಿಶ್ಲೇಷಿಸುವ ಅಗತ್ಯವಿತ್ತು.

ಕೆ. ಸತ್ಯನಾರಾಯಣರು 'ಪಾ.ವೆಂ. ಹೇಳಿದ ಕಥೆ' ಕಥಾಸಂಕಲನವನ್ನು ಕುರಿತಂತೆ ವಿಮರ್ಶಾ ಲೇಖನ ಬರೆದಿದ್ದರೂ ಇದೇ ಸಂಕಲನದ 'ಮೈಕು' ಕಥೆಯನ್ನು ವಿಮರ್ಶಿಸದೇ ಸಂಪೂರ್ಣವಾಗಿ ಕೈ ಬಿಟ್ಟಿದ್ದಾರೆ. ಈ ಕಥೆ ಪ್ರಾರಂಭದಲ್ಲಿ ಲಘುವಾದ ಹಾಸ್ಯ ಶೈಲಿಯಲ್ಲಿ ಸಾಗಿದರೂ ಕೊನೆಗೆ ವಿಷಾದ ತುಂಬಿದ ದುರಂತದಲ್ಲಿ ಅಂತ್ಯವಾಗುತ್ತದೆ.

ಸತ್ಯನಾರಾಯಣರ ವಿಮರ್ಶಾ ಲೇಖನದಲ್ಲಿ ಚರ್ಚೆಯಾಗದ ಅಂಶಗಳ ಬಗ್ಗೆ ಜಿ. ರಾಜಶೇಖರ ಅವರ ವಿಮರ್ಶೆಯಲ್ಲೂ ಈ ಬಗ್ಗೆ ಚರ್ಚೆಯಾಗಿಲ್ಲ. ಹೀಗಾಗಿ ಈ ಮೇಲೆ

ಮಾಡಲಾದ (ಸತ್ಯನಾರಾಯಣರ ವಿಮರ್ಶೆಯ ಬಗ್ಗೆ) ಚರ್ಚೆ ರಾಜಶೇಖರ ಅವರ ವಿಮರ್ಶಾ ಲೇಖನಕ್ಕೂ ('ಮೈಕು' ಕಥೆ ಹೊರತುಪಡಿಸಿ) ಅನ್ವಯಿಸುತ್ತದೆ.

ಜಿ. ರಾಜಶೇಖರ ಅವರು 'ರುಜುವಾತು' ಪತ್ರಿಕೆಯಲ್ಲಿ (ಜುಲೈ–ಸೆಪ್ಟಂಬರ್:೧೯೯೫)ರವಿ ಬೆಳಗೆರೆಯವರ 'ಪಾ.ವೆಂ. ಹೇಳಿದ ಕಥೆ' ಕಥಾಸಂಕಲವನ್ನು ಕುರಿತು ವಿಮರ್ಶೆ ಬರೆದಿದ್ದಾರೆ. ಈ ವಿಮರ್ಶಾ ಲೇಖನದಲ್ಲಿ 'ಪಾ.ವೆಂ. ಹೇಳಿದ ಕಥೆ', 'ವಿತಥ', 'ಪರಿಚಯ', 'ಮೈಕು' ಈ ಕಥೆಗಳ ಬಗ್ಗೆ ವಿವರವಾಗಿ ವಿಮರ್ಶಿಸಿದರೆ, 'ವೇಷಗಳು', 'ಮಸೀದಿ ಬಿದ್ದ ಮೂರನೇ ದಿನ', 'ಹೆಣದ ಮನೆಯಲ್ಲಿ', 'ಕುಹು ಕುಹರ' ಈ ಕಥೆಗಳ ಬಗ್ಗೆ ತೀರಾ ಸಂಕ್ಷಿಪ್ತವಾಗಿ ವಿಮರ್ಶಿಸಿದ್ದಾರೆ. 'ವಂಧ್ಯಾ', 'ಆಕ್ರಮಣ', 'ಭ್ರೂಣ ಸಂಭಾಷಣೆ', 'ಕೊನೆ', 'ಮಿನಾರುಗಳ ಊರಿನಲ್ಲಿ ಅವರು' ಈ ಕಥೆಗಳು ಸಂಪೂರ್ಣವಾಗಿ ಇವರ ವಿಮರ್ಶೆಯ ನಿರ್ಲಕ್ಷ್ಯಕ್ಕೊಳಗಾಗಿವೆ.

ಮಾಸ್ತಿಯವರ ಬಹುತೇಕ ಕಥೆಗಳ ಕಥನ ಕ್ರಮದಂತೆ 'ಪಾ.ವೆಂ. ಹೇಳಿದ ಕಥೆ' ಕಥೆಯಲ್ಲಿ ಕಥೆಗಾರನೇ ಒಂದು ಪಾತ್ರವಾಗಿದ್ದು, ಕಥೆಯನ್ನು ನಿರೂಪಿಸಿಕೊಂಡು ಹೋಗುತ್ತಾನೆ. ಆದರೆ ಈ ಕಥೆಯಲ್ಲಿ ಕಥೆಗಾರ ಸ್ತ್ರೀಪಾತ್ರವಾಗಿ, ನಿರೂಪಕಿಯಾಗಿ ಕಥೆ ಚಿತ್ರಿಸುವುದನ್ನು ಕಾಣಬಹುದು. ಈ ಕಥೆಯನ್ನು ಕುರಿತಂತೆ ಕೆ. ಸತ್ಯನಾರಾಯಣರು ತಮ್ಮ ವಿಮರ್ಶೆಯಲ್ಲಿ 'ಪಾ.ವೆಂ. ಬರೆದ ಕಥೆ ಮುಗಿಯಿತೇ?, ನಡೆಯುತ್ತದೆಯೇ? ಆ ಕಥೆಯ ವಿವರಗಳಿಗೆ ಪಾ.ವೆಂ. ಅವರನ್ನು ಪೀಡಿಸುತ್ತಿರುವಳು ಯಾರದು? ಕಥೆಯ ಪಾತ್ರವೇ? ಯಾರೋ ಹೇಳಿದ ಕಥೆ ನಮ್ಮ ಬದುಕಿನಲ್ಲಿ ನಡೆಯುತ್ತಿರಬಹುದೇ?' ಎಂಬ ಪ್ರಶ್ನೆಗಳನ್ನು ಹುಟ್ಟುಹಾಕಿದ್ದಾರೆ. ಆದರೆ ಜಿ. ರಾಜಶೇಖರ ಅವರು 'ಅಂಬುಜಾ ತನ್ನ ಕಥೆಯನ್ನು ಒಪ್ಪಿಸುತ್ತಿರುವ ವೇಳೆಗೆ ಅವಳು ತನ್ನ ಗಂಡನನ್ನು ತೊರೆದು ಅದು ಅವಳದ್ದೇ ನಿರ್ಧಾರ–ತುಂಬ ಸಮಯವಾಗಿದೆ. ಕಾಲದ ಅಂತರವಿರುವುದರಿಂದ ಅಂಬುಜ ತನ್ನ ಕಥೆಯನ್ನು ಬೇರೊಬ್ಬಳ ಕಥೆಯಂತೆ ಹೇಳಿಕೊಳ್ಳುತ್ತಾಳೆ'. ಎಂದು ಅಭಿಪ್ರಾಯಪಟ್ಟಿದ್ದಾರೆ. ಅಂಬುಜ ತನ್ನ ಗಂಡನನ್ನು ತೊರೆದ ನಂತರ ಒಬ್ಬಂಟಿ ಮನೆಯ ಸುತ್ತಲೂ ಕಾಂಪೋಂಡಿನಲ್ಲಿ ಗುಲಾಬಿ ಗಿಡಗಳು ಬೆಳೆದಿವೆ ಎನ್ನುವ ನಿರೂಪಣೆಯ ಮಾತು ಹಾಗೂ ಕಥೆಯ ಕೊನೆಗೆ ಕಥಾ ನಿರೂಪಕಿ ಹೇಳುವ ಮಾತು "ನನ್ನ ಒಂಟಿ ಮನೆ ಸುತ್ತಾ ಗುಲಾಬಿಗಳು ನಗುತ್ತಿದ್ದವು" ಈ ವಾಕ್ಯಗಳು ಹಾಗೂ ಕಥೆಯ ಕೊನೆಗೆ ಪಾ.ವೆಂ. ರು ನಿರೂಪಕಿಗೆ ಹೇಳಿದ ಮಾತು... "ಬರ್ತೀನಮ್ಮ ಅಂಬುಜ...!" ಇವೆಲ್ಲ ಕಥೆಯ ನಿರೂಪಕಿಯೇ ಅಂಬುಜ ಎಂದು ಸ್ಪಷ್ಟಪಡಿಸುತ್ತದೆ. ಕಥೆ ಓದುತ್ತಾ ಹೋದಂತೆಲ್ಲಾ ಸತ್ಯನಾರಾಯಣರಲ್ಲಿ ಉದ್ಭವಿಸಿದ ಪ್ರಶ್ನೆಗಳು ಓದುಗರಲ್ಲಿಯೂ ಉದ್ಭವಿಸುತ್ತವೆ. ಕಥೆಯ ಕೊನೆಯಲ್ಲಿ 'ಪಾ.ವೆಂ.' ಹೇಳುವ ಮಾತು ಎಲ್ಲಾ ಪ್ರಶ್ನೆಗಳಿಗೂ ಉತ್ತರ ನೀಡುತ್ತದೆ.

'ವಿತಥ' ಕಥೆಯನ್ನು ಕುರಿತು ಸತ್ಯನಾರಾಯಣರು ನಿರೀಂದ್ರಿಯ ಸ್ಥಿತಿಯ ವಿಶ್ಲೇಷಣೆ ಮಾಡಿದರೆ; ರಾಜಶೇಖರ ಅವರು 'ಪಾ.ವೆಂ. ಹೇಳಿದ ಕಥೆ'ಯ ಅಂಬುಜಳೊಂದಿಗೆ

'ವಿತಥ'ದ ಅನಸೂಯಳನ್ನು ಹೋಲಿಸಿ ನೋಡಿದ್ದಾರೆ. 'ವೇಷಗಳು', 'ಮಸೀದಿ ಬಿದ್ದ ಮೂರನೇ ದಿನ' ಈ ಕಥೆಗಳಲ್ಲಿ ರವಿಯವರು ಭಾವನೆಗಳ ಆರ್ದ್ರತೆಯನ್ನು ಚಿತ್ರಿಸುತ್ತಾರೆ ಎಂಬ ಒಂದು ಸಾಲಿನ ಅಭಿಪ್ರಾಯದಲ್ಲಿ ಎರಡೂ ಕಥೆಗಳ ವಿಮರ್ಶೆಯನ್ನು ರಾಜಶೇಖರ ಅವರು ಮಾಡಿದ್ದಾರೆ. ಇಲ್ಲಿ ಈ ಕಥೆಗಳ ಬಗ್ಗೆ, ಅದರ ವಸ್ತು, ಪಾತ್ರ, ಶೈಲಿಯ ಬಗ್ಗೆ ವಿಮರ್ಶಿಸುವ ಅಗತ್ಯವಿದ್ದರೂ ಅದನ್ನು ಕೈಬಿಟ್ಟಿದ್ದಾರೆ. 'ಪರಿಚಯ' ಕಥೆಯ ನಾಯಕ ನಿರೀಂದ್ರಿಯ ಸ್ಥಿತಿಯಿಂದ ಬಿಡುಗಡೆಯಾಗುವ ಅಂಶವನ್ನು ಸತ್ಯನಾರಾಯಣರು ಗಮನಿಸಿಲ್ಲವಾದರೂ ರಾಜಶೇಖರ ಅವರು ಇದನ್ನು ಗುರುತಿಸಿದ್ದಾರೆ. ಪ್ರೀತಿ–ವಾತ್ಸಲ್ಯ ಮಾತ್ರ ಬದುಕನ್ನು ಕ್ಷುದ್ರತೆಯಿಂದ ಮೇಲಕ್ಕೆ ಎತ್ತಬಲ್ಲದು ಎಂಬ ಸತ್ಯವನ್ನು ಕಥೆಯ ಮುಕ್ತಾಯ ಧ್ವನಿಸುತ್ತದೆ' ಎಂದಿದ್ದಾರೆ. 'ಕೊನೆ' ಕಥೆಯನ್ನು ಕುರಿತಂತೆ 'ಇದೊಂದು ವಿಷಾದದಿಂದ ಕೂಡಿದ ಕಥೆ' ಎಂಬ ಸತ್ಯನಾರಾಯಣರ ಅಭಿಪ್ರಾಯವನ್ನು ಒಪ್ಪದೇ, 'ಇದು ಖುಷಿಕೊಡುವ ಲಘುವಾದ ಕಥೆ' ಎಂಬ ಅನಿಸಿಕೆ ವ್ಯಕ್ತಪಡಿಸಿದ್ದಾರೆ. 'ಮೈಕು' ಕಥೆಯ ವಿಷಾದತೆಯ ಅಂತ್ಯವನ್ನು ಸಮರ್ಥವಾಗಿ ವಿಮರ್ಶಿಸಿದ್ದಾರೆ. ಆದರೆ 'ಹೆಣದ ಮನೆಯಲ್ಲಿ', 'ಕುಹು ಕುಹರ' ಈ ಕಥೆಗಳು ತಮ್ಮ ಅತಿರೇಕದಿಂದಲೇ ಓದುಗರನ್ನು ಜಡಗೊಳಿಸುತ್ತವೆ. ಈ ಕಥೆಗಳಲ್ಲಿ ಭಾಷೆಗೆ ಧ್ವನಿ ಇಲ್ಲ ಎಂದಿರುವುದನ್ನು ಒಪ್ಪಬಹುದಾದರೂ ಈ ಕಥೆಗಳಲ್ಲಿ ಕೇವಲ ಭಾಷೆ, ಧ್ವನಿ, ಬರವಣಿಗೆಯ ಶೈಲಿ ತಂತ್ರದ ಬಗ್ಗೆ ವಿವೇಚಿಸಿದ್ದಾರೆಯೇ ಹೊರತು ವಸ್ತು, ಪಾತ್ರಗಳ ಬಗ್ಗೆ ವಿಮರ್ಶಿಸಿಲ್ಲ.

ನಿಜ ಜೀವನದ ಜೀವಂತ ವ್ಯಕ್ತಿಗಳೇ ರವಿ ಬೆಳಗೆರೆಯವರ ಕಥೆಗಳಲ್ಲಿ ಪಾತ್ರಗಳಾಗಿ ಹರಿದು ಬಂದಿರುವುದನ್ನು ಕಾಣಬಹುದು. ಬೆಳಗೆರೆಯವರ ಮೇಲೆ ತುಂಬಾ ಪ್ರಭಾವ ಬೀರಿದವರು ಹಾಗೂ ಅವರ ಪತ್ರಿಕೋದ್ಯಮದ ಗುರುಗಳಲ್ಲೊಬ್ಬರಾದ, ಅಂದಿನ 'ಕಸ್ತೂರಿ' ಮಾಸ ಪತ್ರಿಕೆಯ ಸಂಪಾದಕರಾಗಿದ್ದ 'ಪಾ.ವೆಂ. ಆಚಾರ್ಯ' (ಪಾಡಿಗಾರು ವೆಂಕಟರಮಣ ಆಚಾರ್ಯ)ರೇ 'ಪಾ.ವೆಂ. ಹೇಳಿದ ಕಥೆ'ಯ ಬಹುಮುಖ್ಯ ಪಾತ್ರವಾಗಿದ್ದಾರೆ. ಇದೇ ಕಥೆಯ ಶೀರ್ಷಿಕೆಯೇ ಕಥಾಸಂಕಲನದ ಶೀರ್ಷಿಕೆಯಾಗಿ ಮೂಡಿಬಂದಿದೆ. ಕಥೆಯ ನೈಜತೆಗೆ ಪಾ.ವೆಂ. ಆಚಾರ್ಯರು ಬದುಕಿ ಬಾಳಿದ ಹುಬ್ಬಳ್ಳಿ ನಗರದ ಚಿತ್ರಣ ಈ ಕಥೆಗಿದೆ. ಇಡೀ ಕಥೆ ನಡೆಯುವುದು ಹುಬ್ಬಳ್ಳಿಯಲ್ಲಿಯೇ. ಬೆಳಗೆರೆಯವರ ಇನ್ನೊಂದು ಕಥೆ 'ಕೊನೆ' ಕೂಡಾ ಹುಬ್ಬಳ್ಳಿ ನಗರದಲ್ಲಿಯೇ ಸಾಗುತ್ತಾ ಹೋಗುತ್ತದೆ. ಈ ಕಥೆಯಲ್ಲಿಯೂ ನಿಜವಾದ ವ್ಯಕ್ತಿಗಳೇ ಪಾತ್ರಗಳಾಗಿ ಮೂಡಿ ಬಂದಿದ್ದಾರೆ. ಇಲ್ಲಿ ರವಿ ಬೆಳಗೆರೆಯವರು ತಮ್ಮದೇ ಹೆಸರಿನಲ್ಲಿ ತಮ್ಮನ್ನು ಕಥೆಯ ಕಥಾ ನಾಯಯಕನನ್ನಾಗಿ ಚಿತ್ರಿಸಿಕೊಂಡಿರುವುದು ಈ ಕಥೆಯ ವೈಶಿಷ್ಟ್ಯ. ಉಳಿದಂತೆ ಬರಗೂರು ರಾಮಚಂದ್ರಪ್ಪ, ಚನ್ನಣ್ಣ ವಾಲೀಕಾರ, ಚಂದ್ರಶೇಖರ ಪಾಟೀಲ (ಚಂಪಾ), ಚಂದ್ರಕಾಂತ ವಡ್ಡು, ಜಿ.ಬಿ. ಸತ್ತೂರ್, ರಂಜಾನ್ ದರ್ಗಾ, ದೇವನೂರು ಮಹಾದೇವ, ಎಚ್.ಎಲ್. ಹನುಮಂತಯ್ಯ, ಅಶೋಕ ಶೆಟ್ಟರ್, ಅಜಯಕುಮಾರ್ ಪಾಟೀಲ ಈ ಹೆಸರುಗಳೆಲ್ಲಾ ಈ ಕಥೆಯಲ್ಲಿ ಕೆಲವು ಉಲ್ಲೇಖಗಳಾಗಿ, ಕೆಲವು ಪಾತ್ರಗಳಾಗಿ ಮೈದಳೆದಿವೆ.

ಈ ಎಲ್ಲಾ ಅಂಶಗಳನ್ನು ಈ ಇಬ್ಬರೂ (ಕೆ. ಸತ್ಯನಾರಾಯಣ ಹಾಗೂ ಜಿ. ರಾಜಶೇಖರ) ವಿಮರ್ಶಕರು ಗುರುತಿಸಿಲ್ಲ.

ಮಾಸ್ತಿ ಶತಮಾನೋತ್ಸವ ಕಥಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದ 'ವಂಧ್ಯಾ' ಕಥೆಯು ಈ ಎರಡೂ ವಿಮರ್ಶಾ ಲೇಖನದಲ್ಲಿ ವಿಮರ್ಶೆಯ ನಿರ್ಲಕ್ಷಕ್ಕೆ ಒಳಗಾಗಿದ್ದರೂ, ಈ ಕಥೆಯನ್ನು ಕುರಿತಂತೆ ವಿಮರ್ಶಕ, ಲೇಖಕರಾದ ಕೆ. ನರಸಿಂಹಮೂರ್ತಿಯವರು ಹೀಗೆ ವಿಮರ್ಶಿಸಿದ್ದಾರೆ...

'ವಂಧ್ಯಾ'ದ 'ಅಪ್ಪ' ಮನೆಯ ಹೊರಗೆ ತನ್ನ ಕೆಳಗಿನ ಗೊಲ್ಲ ಕಾರ್ಮಿಕರ ಜೀವ ಹಿಂಡುತ್ತಾನೆ. ಮನೆಯೊಳಗೆ ಹೆಂಡತಿಯ ಇಚ್ಛೆ-ಅನಿಚ್ಛೆಗಳನ್ನು ಪರಿಗಣಿಸದೇ ತನ್ನ ಲೈಂಗಿಕ ತೃಪ್ತಿಗೆ ಅವಳನ್ನು ಬಳಸಿಕೊಳ್ಳುತ್ತಾನೆ. ಅವನ ಮುತ್ತಜ್ಜನ ಗರುಡ ಪಕ್ಷಿಯ ಹತ್ಯೆಗೋ ಅವನಿಂದಲೇ ನಡೆಯುತ್ತಿದ್ದ ಹಿಂಸೆಗೋ ಅವನ ಸಂಸಾರವೂ ಊರಿಗೆ ಊರೂ ಶಾಪಗ್ರಸ್ತವಾದಂತೆ ಬರ ಅಡಸಿ ಗ್ರೀಕರ ಫ್ಯೂರಿಗಳಂತಹ ರಣಹದ್ದುಗಳು ಊರನ್ನೇ ನಿರ್ನಾಮ ಮಾಡಿಬಿಡುವ ಘೋರ ದುರಂತವು ಇನ್ನಷ್ಟು ಭಯಂಕರವಾಗುವುದು. 'ಅಪ್ಪ'ನ ಮಗಳೂ ತಾನೂ ರಣಹದ್ದಾಗಿ ಮನುಷ್ಯತ್ವವನ್ನು ಸಂಪೂರ್ಣವಾಗಿ ನೀಗಿಕೊಂಡು ಇತರ ನಿರ್ಘೃಣ ಪಕ್ಷಿಗಳೊಡನೆ ಒಂದಾಗುವುದರಿಂದ, ಜೀವಂತ ಶವವಾಗಿದ್ದ ಅವಳ ತಮ್ಮ ಬಾಗಿಲು ತೆರೆಯುವ ಮುನ್ನ 'ಯಾರು?' ಎಂದು ಕೇಳಿದಾಗ 'ನಾನು ಅಕ್ಕಾ' ಎಂದು ಅವನ ಮಾಂಸವನ್ನು ಸವಿಯುವ ತವಕದಿಂದ ಅವಳು ಬರುವ ಕಥೆಯ ಅಂತಿಮ ದೃಶ್ಯ ರಕ್ತವನ್ನು ಹೆಪ್ಪುಗಟ್ಟಿಸುವಷ್ಟು ಭಯಾನಕ. ಕಾಫ್ಕಾ ಅಂತಹವರು ಹಾಕಿಕೊಟ್ಟ ಫ್ಯಾಂಟಸಿಯ ಹಾದಿಯಲ್ಲಿ ಕಥೆಯ ಕರ್ತೃ ಈ ಕಥೆಯಲ್ಲಿ ಒಂದು ವಿಜಯ ಸ್ಥಾಪಿಸಿದ್ದಾರೆಂದು ಹೇಳಬಹುದು. ಮಗಳು ರಣಹದ್ದಾಗಿ ಪರಿವರ್ತಿತಳಾಗುವ ಹಂತ ಹಂತದ ಚಿತ್ರಣ ವಾಸ್ತವಿಕವೋ ಎನ್ನುವಂತಹ ಭ್ರಮೆ ಹುಟ್ಟಿಸುವಷ್ಟು ಸಹಜ'.[೩] ಎಂದಿದ್ದಾರೆ.

ರವಿಯವರ ಬಹುತೇಕ ಕಥೆಗಳಲ್ಲಿ ಗಂಡು ಹೆಣ್ಣಿನ ದೈಹಿಕ ಮಿಲನದ ಸನ್ನಿವೇಶಗಳು ಚಿತ್ರಣಗೊಂಡಿರುವುದನ್ನು ವಿಮರ್ಶಕರು ಗಮನಿಸಿದಂತಿಲ್ಲ. 'ಕೊನೆ', 'ಮೈಕು', 'ಹೆಣದ ಮನೆ'ಯಲ್ಲಿಯಂತಹ ಕೆಲವು ಕಥೆಗಳನ್ನು ಹೊರತುಪಡಿಸಿದರೆ ಉಳಿದೆಲ್ಲಾ ಕಥೆಗಳಲ್ಲಿ ಈ ಬಗೆಯ ಮಿಲನದ ಚಿತ್ರಣ ಸಾಮಾನ್ಯವಾಗಿ ಕಂಡುಬರುತ್ತದೆ. 'ಭ್ರೂಣ ಸಂಭಾಷಣೆ', 'ಕುಹು ಕುಹರ', 'ವಿತಥ', 'ವಂಧ್ಯಾ', 'ಪಾ.ವೆಂ. ಹೇಳಿದ ಕಥೆ', 'ವೇಷಗಳು', ಮಸೀದಿ ಬಿದ್ದ ಮೂರನೇ ದಿನ', 'ಆಕ್ರಮಣ', 'ನೆರಳು', 'ಶಾಲಿನಿ', 'ಹಂತ', 'ಬರುವನೇನೇ ಸಖಿ ಚೆಲುವ...' ಈ ಕಥೆಗಳನ್ನು ಇದಕ್ಕೆ ಉದಾಹರಿಸಬಹುದು. 'ದಾರಿ' ಕಥೆಯಲ್ಲಿ ಹರಿ-ನಾಗೂರರ ಸಲಿಂಗ ಕಾಮ ಸ್ನೇಹದ ಬಗ್ಗೆ, ಪಟ್ಟಣಶೆಟ್ಟಿ- ಪರಮೇಶಿಯರ ವಿಕೃತ ಸಲಿಂಗ ಕಾಮದ ಬಗ್ಗೆ ಚಿತ್ರಣಗೊಂಡಿದೆ. ಈ ಕಥೆಯಲ್ಲಿ ಹೋಟೆಲ್ ಕಾರ್ಮಿಕರ ಶೋಷಣೆಯ ಒಂದು ಭಾಗವಾಗಿ ಪಟ್ಟಣಶೆಟ್ಟಿಯ ಸಲಿಂಗ ಕಾಮ ಕಾಣಿಸಿಕೊಂಡಿದೆ. ಇಲ್ಲಿಯ ಕಾಮಕ್ಕೆ

ಕಲಾತ್ಮಕತೆಯಿಲ್ಲ; ಭೀಕರ ಕರಾಳತೆ ಇದೆ. ಈ ಮೇಲೆ ಉದಾಹರಿಸಿದ ಕಥೆಗಳಲ್ಲಿ ಮಿಲನದ ಸನ್ನಿವೇಶಗಳನ್ನು ಅಶ್ಲೀಲತೆಯ ಸೋಂಕಿಲ್ಲದೇ ರವಿಯವರು ಚಿತ್ರಿಸಿರುವುದು ಕಂಡುಬರುತ್ತದೆ. ಆದರೆ ದೈಹಿಕ ಮಿಲನವೆಂಬ ಈ ಸೃಷ್ಟಿಕ್ರಿಯೆಗೆ ಕಥೆಗಾರರು ಯಾಕಿಷ್ಟು ಮಹತ್ವ ಕೊಟ್ಟಿದ್ದಾರೆಂಬುದು ನಿಗೂಢವಾಗಿ ಉಳಿಯುತ್ತದೆ.

ಕನ್ನಡವೂ ಸೇರಿದಂತೆ ಇತರೆ ಅನೇಕ ಭಾರತೀಯ ಭಾಷೆಗಳಲ್ಲಿ ಪ್ರಕಟವಾಗುವ 'ದ ಸಂಡೇ ಇಂಡಿಯನ್' (೦೭ ಮಾರ್ಚ್-೨೦೧೦) ಪಾಕ್ಷಿಕ ಪತ್ರಿಕೆಯು ಇದುವರೆಗೆ ಕನ್ನಡದಲ್ಲಿ ಪ್ರಕಟವಾದ ನೂರು ಶ್ರೇಷ್ಠ ಕೃತಿಗಳಲ್ಲಿ ರವಿ ಬೆಳಗೆರೆಯವರ 'ಪಾ.ವೆಂ. ಹೇಳಿದ ಕಥೆ' ಕಥಾಸಂಕಲನವನ್ನು ಪರಿಗಣಿಸಿದೆ. ಈ ಸಂಕಲನವನ್ನು ಕುರಿತು ಹೀಗೆ ವಿಶ್ಲೇಷಿಸಿದೆ.

"ಪತ್ರಕರ್ತ ಹಾಗೂ ಸಾಹಿತಿ ರವಿ ಬೆಳಗೆರೆ ಪತ್ರಿಕೋದ್ಯಮದ ನಿತ್ಯ ಸಂತೆಯಲ್ಲಿ ಕುಳಿತೇ ಕಂಡ ಕನಸು 'ಪಾ.ವೆಂ ಹೇಳಿದ ಕಥೆ' ಈ ಕಥಾಸಂಕಲನ ತನ್ನ ನಿರೂಪಣಾ ವೈಶಿಷ್ಟ್ಯತೆ ಹಾಗೂ ವಿಲಕ್ಷಣ ವಸ್ತುಗಳಿಂದ ಗಮನ ಸೆಳೆಯುತ್ತದೆ. ಮೆಟಾ ಮಾರ್ಫಸಿಸ್ ಶೈಲಿಯ 'ವಂಧ್ಯಾ' ಬ್ರಾಹ್ಮಣ ಮನೆತನದ ಪೂರ್ಣಮ್ಮ ಹದ್ದುಗಳೊಂದಿಗೆ ಮಾತಾಡುತ್ತ ತಾನೇ ಹದ್ದಾಗಿ ಮಾಂಸ ಮೆಲ್ಲುವ 'ದುಃಸ್ವಪ್ನ'ದಂಥ ಕಥೆ. ಹಾಗೆಯೇ ಪ್ರೇಮಕ್ಕೆ ಹೊಸ ಭಾಷ್ಯ ಬರೆಯುವ 'ಮಿನಾರುಗಳ ಊರಿನಲ್ಲಿ', ಒಂಟಿ ಹೆಣ್ಣೊಂದರ ಅಂತರಂಗದ ಕಾವ್ಯ 'ಪಾ.ವೆಂ. ಹೇಳಿದ ಕಥೆ' ಹೀಗೆ ವಾಸ್ತವದಲ್ಲಿ ಅಸಂಗತವಾಗಬಹುದಾದರೂ ಮನೋರಂಗದಲ್ಲಿ ಸತ್ಯವಾಗಬಲ್ಲ ಹಾಗೂ ಸತ್ಯವಾಗುತ್ತಲೇ ಹೊಸದೊಂದು ಲೋಕದೃಷ್ಟಿಗೆ ಜೀವ ಸೆಲೆಯಾಗಬಲ್ಲ ಕನಸು, ಭ್ರಮೆ, ಕಲ್ಪನೆಗಳಿಗೆ ಕಥೆಯ ಬಟ್ಟೆತೊಡಿಸಿ ಓದುಗರ ಮುಂದಿಟ್ಟಿದ್ದಾರೆ ರವಿ ಬೆಳಗೆರೆ"[೪]

ರವಿಯವರ ಕೆಲವು ಕಥೆಗಳಲ್ಲಿ ಪ್ರಾದೇಶಿಕತೆಯ ಸೊಗಡು ಕಾಣಿಸಿಕೊಂಡಿದೆ. 'ಪಾ.ವೆಂ. ಹೇಳಿದ ಕಥೆ'ಯಲ್ಲಿ ಕಥೆಯ ನೈಜತೆಗಾಗಿ ಪಾ.ವೆಂ. ಆಚಾರ್ಯರು ಬದುಕಿ, ಬಾಳಿದ ಹುಬ್ಬಳ್ಳಿ ನಗರದ ಚಿತ್ರಣ ಈ ಕಥೆಗಿದೆ. 'ಕೊನೆ', 'ಮೈಕು', 'ದಾರಿ' ಕಥೆಗಳಲ್ಲಿಯೂ ಹುಬ್ಬಳ್ಳಿ ನಗರದ ಜನಜೀವನದ ಚಿತ್ರಣವಿದೆ. ಉತ್ತರ ಕರ್ನಾಟಕದ ಭಾಷೆಯನ್ನು ಈ ಕಥೆಗಳಲ್ಲಿ ಲೇಖಕರು ಸಮರ್ಥವಾಗಿ ಕಟ್ಟಿಕೊಂಡಿದ್ದಾರೆ. 'ಮೈಕು' ಕಥೆಯ ಸಂಭಾಷಣೆಗಳನ್ನು ಗಮನಿಸಿದಾಗ ಈ ಮಾತು ವೇದ್ಯವಾಗುತ್ತದೆ. 'ವಂಧ್ಯಾ' ಕಥೆಯಲ್ಲಿ ಭೀಕರ ಬರಗಾಲಕ್ಕೆ ಒಳಗಾದ ಬಳ್ಳಾರಿ ನಗರದ ಚಿತ್ರಣ, 'ಹಂತ' ಕಥೆಯಲ್ಲಿಯೂ ಬಳ್ಳಾರಿ ಬಯಲು ಸೀಮೆಯ ಹೊಸಪೇಟೆ, ಹುಲಿಗಿ ಪ್ರದೇಶಗಳ ಚಿತ್ರಣವಿದೆ. ಈ ಭಾಗದ ಜನರ ಆಡು ಭಾಷೆ, ಜನಜೀವನ, ಭೌಗೋಳಿಕ ಅಂಶಗಳು, ಮೂಢನಂಬಿಕೆ, ಸಂಪ್ರದಾಯ, ಆಚರಣೆ ಇವೆಲ್ಲವೂ ಸೇರಿ ಕಥೆಗೆ ಪ್ರಾದೇಶಿಕತೆಯ ಸೊಗಡನ್ನು ಹೆಚ್ಚಿಸಿವೆ.

ರವಿಯವರ ಕಥೆಗಳಲ್ಲಿನ ಪ್ರಗತಿಶೀಲ ಬರವಣಿಗೆಯ ಅಂಶಗಳು, ಅದರ ದೌರ್ಬಲ್ಯಗಳು, ಕಥೆಗಳ ಹಿಂದಿರುವ ಕಥೆಗಾರನ ಆತ್ಮವಿಶ್ವಾಸ ಇವುಗಳನ್ನೆಲ್ಲಾ 'ಪಾ.ವೆಂ. ಹೇಳಿದ ಕಥೆ'

ಕಥಾಸಂಕಲನದಲ್ಲಿ ಜಿ. ರಾಜಶೇಖರರವರು ಕಂಡುಕೊಂಡಿದ್ದಾರೆ. ಅವುಗಳನ್ನೆಲ್ಲ ಹೀಗೆ ವಿಶ್ಲೇಷಿಸಿದ್ದಾರೆ...

"ನನ್ನ ಆಕ್ಷೇಪವಿರುವುದು ರವಿಯ ಈ ಕಥೆಗಳ ಹಿಂದೆ ಇರುವ ಆತ್ಮವಿಶ್ವಾಸದ ಬಗ್ಗೆ. ಎಲ್ಲಿ ಬೇಕಾದರೂ ಸಲ್ಲುವ ಕಥೆಗಳನ್ನು ಹೇಳುವ ಲೇಖಕನಿಗೆ ಬದುಕನ್ನು ತಾನು ಇಡಿಯಾಗಿ ಗ್ರಹಿಸಿದ್ದೇನೆ ಎಂಬ ಆತ್ಮವಿಶ್ವಾಸವಿರುತ್ತದೆ. ರವಿಯ ಈ ಕಥೆಗಳು ಪ್ರಗತಿಶೀಲ ಬರವಣಿಗೆಯನ್ನು ಹೋಲುವುದು ಕೂಡ ಆಕಸ್ಮಿಕವಲ್ಲ. ಆ ಬರವಣಿಗೆಯ ಎಲ್ಲಾ ದೌರ್ಬಲ್ಯಗಳು ಇಲ್ಲಿ ಎದ್ದು ಕಾಣಿಸುತ್ತವೆ. ಎಲ್ಲರ ಒಳಿತಿಗಾಗಿ ಕೂಗು ಹಾಕುವವನ ಹುಸಿ ಗತ್ತು, ಭಾಷೆಯ ದುಂದು, ಭೀಭತ್ಸವನ್ನು ಪರಿಣಾಮಕ್ಕೋಸ್ಕರವೇ ಬೆಳೆಸಿಕೊಂಡು ಹೋಗುವುದು ಇವೇ ಆ ದೌರ್ಬಲ್ಯಗಳು. ಸಾಹಿತ್ಯದಲ್ಲಿ ಪ್ರಗತಿಶೀಲತೆಯ ಹಿಂದೆ ಒಂದು ರಾಜಕೀಯ ಸಿದ್ಧಾಂತದ ಅಹಮಿಕೆ ಕೆಲಸಮಾಡಿರುವುದನ್ನು ನಾವು ನೆನಪು ಮಾಡಿಕೊಳ್ಳಬೇಕು. ಸಮಸ್ತ ಬದುಕನ್ನು ಒಂದು ಸೂತ್ರದಲ್ಲಿ ವಿವರಿಸಬಲ್ಲೆ ಎಂಬ ಸಿದ್ಧಾಂತ ಸಾಹಿತಿಗಳನ್ನು ತಲುಪುವ ಹೊತ್ತಿಗೆ ಭಾಷೆಯ ಬಗ್ಗೆ ಆತಂಕವೇ ಇಲ್ಲದ ಆತ್ಮವಿಶ್ವಾಸದ ರೂಪ ಪಡೆದುಕೊಂಡಿತ್ತು. ಈಗ ಈ ಸಿದ್ಧಾಂತ ಕಟ್ಟಿದ ರಾಜಕೀಯ ವ್ಯವಸ್ಥೆ ಕುಸಿದುಬಿದ್ದ ಮೇಲೆ ಇಂತಹ ಕಥೆಗಳನ್ನು ಓದುವದು ಎಂದರೆ ಮಣ್ಣು ತಿಂದ ಹಾಗೆ. ಪ್ರಗತಿಶೀಲರಿಗೆ ಇದು ಆತ್ಮವಿಶ್ವಾಸದ ಕಾಲವಲ್ಲ. ಆತ್ಮದ ಕಗ್ಗತ್ತಲ ರಾತ್ರಿಗಳಲ್ಲಿ ಅವರು ತಮ್ಮ ಹಾದಿ ಹುಡುಕಬೇಕಾಗಿದೆ."[೫] ಎಂದಿದ್ದಾರೆ. ಆದರೆ ಈ ಹೇಳಿಕೆಯಲ್ಲಿ ಸ್ಪಷ್ಟತೆ ಕಾಣಲಾಗುವುದಿಲ್ಲ. ಇನ್ನೂ ಹೆಚ್ಚಿನ ವಿವರಣೆ ಅಗತ್ಯವಿತ್ತು ಎನಿಸುತ್ತದೆ. ಏಕೆಂದರೆ ರವಿಯವರ ಕಥೆಗಳಲ್ಲಿ ಪ್ರಗತಿಶೀಲ ಬರವಣಿಗೆಯನ್ನು ಹೋಲುತ್ತಿರುವುದರ ಬಗ್ಗೆ, ಕಥೆಗಳ ಹಿಂದಿರುವ ಆತ್ಮವಿಶ್ವಾದ ಬಗ್ಗೆ ಹೇಳಿದ್ದಾರೆಯೇ ಹೊರತು ಯಾವ ಯಾವ ಕಥೆಗಳಲ್ಲಿ ಎಂಬುದನ್ನು ಇಲ್ಲಿ ವಿವರಿಸಿಲ್ಲ. ರವಿಯವರ ಎಲ್ಲಾ ಕಥೆಗಳು ಪ್ರಗತಿಶೀಲ ಬರವಣಿಗೆಯನ್ನು ಹೋಲುತ್ತಿವೆಯೇ? ಎಂಬ ಗೊಂದಲ ಓದುಗನನ್ನು ಕಾಡುವುದು ಸಹಜ. ಜಿ. ರಾಜಶೇಖರ್‌ರು ರವಿ ಬೆಳಗೆರೆಯವರ ಕಥೆಗಳಲ್ಲಿ 'ಪ್ರಗತಿಶೀಲ'ದ ಬಗ್ಗೆಯೇ ಹುಡುಕಾಟ ನಡೆಸಿದ್ದಾರೆ. ಅದರಾಚೆಗೂ ನೋಡುವ ಪ್ರಯತ್ನ ಮಾಡಿಲ್ಲವೆನಿಸುತ್ತದೆ. ಕೆ. ಸತ್ಯನಾರಾಯಣರ ವಿಮರ್ಶೆಯೊಂದಿಗೆ ಇದನ್ನು ಹೋಲಿಸಿದಾಗ ಈ ಮಾತು ಸ್ಪಷ್ಟವಾಗುತ್ತದೆ. ಕೆ. ಸತ್ಯನಾರಾಯಣರು ರವಿಯವರ ಕಥೆಗಳಲ್ಲಿ ಎಲ್ಲಾ ಸಾಹಿತ್ಯ ಪಂಥದ ಲಕ್ಷಣಗಳನ್ನು ಕಂಡುಕೊಳ್ಳುವ ಪ್ರಯತ್ನಮಾಡಿದ್ದಾರೆ. ಅದನ್ನು ಹೀಗೆ ವಿಶ್ಲೇಷಿಸಿದ್ದಾರೆ...

"ನಾನಂತೂ ನನ್ನ ಕಥೆಗಳಿಂದಾಗಲೀ, ನನ್ನ ಮಿತ್ರರ ಕಥೆಗಳಿಂದಾಗಲೀ ಇತಿಹಾಸ ನಿರ್ಮಾಣವಾಗುವುದನ್ನು, ನಾಳೆಯಿಂದಲೇ ಹೊಸ ಪಂಥ ಸಾಕ್ಷಾತ್ಕಾರವಾಗುವುದನ್ನು ನಿರೀಕ್ಷಿಸುವ ಪೈಕಿಯಲ್ಲ. ಕಥೆ ಓದಿದ ಮೇಲೆ ಬದುಕಿನ ಬಗ್ಗೆ, ಮನುಷ್ಯರ ಬಗ್ಗೆ ನನ್ನಲ್ಲಿ ಒಂದಷ್ಟು ವಿನಯವೂ, ಬೆರಗೂ ಮೂಡಿದರೆ ಅಷ್ಟೇ ಸಾಕು. ಇದು ಯಾವ ಪಂಥದ ಕಥೆಗಳಾದರೂ ಆಗಬಹುದು. ನವ್ಯ, ನವ್ಯೇತರ, ನವ್ಯೋತ್ತರ, ದಲಿತ, ಬಂಡಾಯ, ರೋಮ್ಯಾಂಟಿಕ್

ಯಾವ ಜಾತಿಯ ಕಥೆಗಳಾದರೂ ಸರಿಯೇ: ಮ್ಯಾಗಝಿನ್ ಕಥೆಯಾದರೂ ಅಡ್ಡಿಯಿಲ್ಲ. ಈ ಮಾತು ಇಲ್ಲಿ ಯಾಕೆಂದರೆ, ರವಿ ಬರೆದಿರುವ ಕಥೆಗಳು ಎಲ್ಲ ಜಾತಿಗಳಿಗೂ ಸೇರಿದ್ದವಾದ್ದರಿಂದ. ಹೀಗೆ ಬೇರೆ ಬೇರೆ ಜಾತಿ ಸೇರಿಯೂ (ಉದಾ: ವಿತಥ, ಪಾ.ವೆಂ. ಹೇಳಿದ ಕಥೆ, ಭ್ರೂಣ ಸಂಭಾಷಣೆ) ಒಳ್ಳೆಯ ಕಥೆಗಳು ನಮ್ಮ ಮನಸ್ಸಿನ ಮೇಲೆ ಮಾಡಬೇಕಾದ ಪರಿಣಾಮವನ್ನೇ ಮಾಡುವುದರಿಂದ"[೬] ಎಂದು ಹೇಳಿದ್ದಾರೆ. ಮುಂದುವರಿದು... 'ಎಲ್ಲಾ ರೀತಿಯ, ಎಲ್ಲಾ ಪಂಥದ ಕಥೆಗಳನ್ನು ರವಿ ಬರೆದಿದ್ದಾರೆ. ಇಂತಹ ಕಥೆಗಾರ ಹೀಗೇ ಬರೆಯಬೇಕು, ಇಂತಹ ವಸ್ತುವನ್ನು ಕುರಿತು ಮಾತ್ರವೇ ಬರೆಯಬೇಕು ಎನ್ನುವ ಠರಾವಿನ ಕಾಲ ನಮ್ಮದು. ಇಂತಹ ಠರಾವುಗಳನ್ನೆಲ್ಲಾ ಮರೆತು ತೆರೆದ ಮನಸ್ಸಿನಿಂದ ಈ ಕಥೆಗಳನ್ನು ಓದುವಂತೆ ಪ್ರೇರೇಪಿಸುವ ಶಕ್ತಿ ಇಲ್ಲಿಯ ಕಥೆಗಳಿಗಿವೆ'[೭] ಎಂದಿದ್ದಾರೆ.

ಈ ಇಬ್ಬರು ವಿಮರ್ಶಕರ ಹೇಳಿಕೆಗಳನ್ನು ಗಮನಿಸಿದಾಗ ಪರಸ್ಪರ ವೈರುಧ್ಯ ಅಥವಾ ಅವರ ವಿಭಿನ್ನ ದೃಷ್ಟಿಕೋನಗಳು ನಮಗೆ ಸ್ಪಷ್ಟವಾಗುತ್ತವೆ. ರವಿಯವರ ಕೆಲವು ಕಥೆಗಳು ಪ್ರಗತಿಶೀಲ ಧೋರಣೆಯನ್ನು ಹೊಂದಿದ್ದರೂ ಅದರ ದಟ್ಟತೆಯಲ್ಲಿ ಇತರ ಪಂಥದ ಕಥೆಗಳು ಮಸುಕಾಗಿರಬಹುದು. ಜಿ. ರಾಜಶೇಖರ್‌ರವರು ಇದರ ಬಗ್ಗೆ ವಿಶ್ಲೇಷಿಸುವ ಅಗತ್ಯವಿತ್ತು ಎನಿಸುತ್ತದೆ.

ರವಿ ಬೆಳಗೆರೆಯವರ "ಒಟ್ಟಾರೆ ಕಥೆಗಳು" ಕಥಾಸಂಕಲನವನ್ನು ಕುರಿತು 'ಡಾ. ಬಂಜಗೆರೆ ಜಯಪ್ರಕಾಶ'ರವರು ತಮ್ಮ 'ಉಲಿಯ ಉಯ್ಯಲೆ' ಲೇಖನ ಸಂಕಲನ ಕೃತಿಯಲ್ಲಿ ವಿಮರ್ಶಾ ಲೇಖನವನ್ನು ಬರೆದಿದ್ದಾರೆ. ಇಲ್ಲಿ ರವಿಯವರ ಕಥೆಗಳನ್ನು ಪ್ರತ್ಯೇಕವಾಗಿ, ಒಂದೊಂದಾಗಿ ವಿಶ್ಲೇಷಿಸದೇ ಒಟ್ಟು ಕಥೆಗಳ ಸಾರವನ್ನು ವಿಮರ್ಶಿಸಿದ್ದಾರೆ. ಈ ಕೃತಿಯ ಮುನ್ನುಡಿಯಲ್ಲಿ ಬಂಜಗೆರೆಯವರು ಹೀಗೆ ಹೇಳಿಕೊಂಡಿದ್ದಾರೆ...

"ಪುಸ್ತಕಾವಲೋಕನದಲ್ಲಿರುವ ಬರಹಗಳನ್ನು ವಿಮರ್ಶೆಯೆಂದು ನಾನು ಕರೆಯುವುದಿಲ್ಲ. ಆಯಾ ಕೃತಿಗಳನ್ನು ಓದುವಾಗ ಹುಟ್ಟಿದ ಅನಿಸಿಕೆಗಳನ್ನು ಮಾತ್ರ ಬರೆದಿದ್ದೇನೆ. ಅವು ಆ ಕೃತಿಗಳ ಮೌಲ್ಯಮಾಪನವಲ್ಲ"

ಆದರೆ ಬಂಜಗೆರೆಯವರು ಒಟ್ಟು ಕಥೆಗಳ ಸಾರವನ್ನು ವಿಶ್ಲೇಷಿಸುತ್ತಾ ಜೊತೆಯಲ್ಲಿಯೇ ವಿಮರ್ಶೆ ಕೂಡಾ ಮಾಡಿದ್ದಾರೆ. ರವಿಯವರ ಕಥೆಗಳನ್ನು ಕುರಿತು ಬರೆದ "ಓದಿನ ಖುಷಿ ಕೊಡುವ ಕಥೆಗಳು" (ಉಲಿಯ ಉಯ್ಯಲೆ, ಪುಟ–೧೪೮) ಶೀರ್ಷಿಕೆಯ ಈ ಲೇಖನವನ್ನು ಓದಿದಾಗ ಅದರಲ್ಲಿಯ ವಿಮರ್ಶೆಯ ಬರವಣಿಗೆ ನಮಗೆ ಸ್ಪಷ್ಟವಾಗುತ್ತದೆ. ಹೀಗಾಗಿ ಬಂಜಗೆರೆ ಜಯಪ್ರಕಾಶರವರ ಲೇಖನವನ್ನು ಇಲ್ಲಿ ವಿಮರ್ಶಾ ಲೇಖನವೆಂದೇ ಪರಿಗಣಿಸಲಾಗಿದೆ.

ಬೆಳಗೆರೆಯವರ ಕಥೆಗಳಲ್ಲಿ ಬರಹದ ಬಗ್ಗೆ ಇರುವ ಕಥೆಗಾರರ ಅತಿಯಾದ ಆತ್ಮವಿಶ್ವಾಸವನ್ನು ಜಿ. ರಾಜಶೇಖರ್‌ರವರು ಗುರುತಿಸಿದಂತೆ ಬಂಜಗೆರೆಯವರು ಅದನ್ನು

ಇಲ್ಲಿ ಗುರುತಿಸಿದ್ದಾರೆ. ಶಾಲಿನಿ, ಕೊನೆ, ಮಿನಾರುಗಳ ಊರಿನಲ್ಲಿ ಅವರು, ಬದುಕೊಂದು ಸತತ ಅಭ್ಯಾಸ, ಭ್ರೂಣ ಸಂಭಾಷಣೆ, ಕುಹು ಕುಹರ, ದಾರಿ, ಹೀಗೊಬ್ಬಳು ಸೀತಾದೇವಿ, ಆಕ್ರಮಣ, ಸತ್ಯಭಾಮೆಯ ತೆಕ್ಕೆಯಿಂದ ಈ ಕಥೆಗಳಲ್ಲಿ ಮನಸ್ಸಿಗೆ ನಾಟುವ ಭಾಗಗಳಿದ್ದರೂ, ಕಥೆಗಾರ ತನ್ನ ಕಸುಬುದಾರಿಕೆಯನ್ನು ತೋರಿಸಿದ್ದರೂ, ಬರಹದ ಬಗ್ಗೆ ಇರುವ ಅತಿಯಾದ ಆತ್ಮವಿಶ್ವಾಸ, 'ನಥಿಂಗ್ ಅಫಿಷಿಯಲ್ ಅಬೌಟ್ ಇಟ್' ಎಂಬ ಧೋರಣೆಯಿಂದ ಈ ಕಥೆಗಳೆಲ್ಲಾ ಮಾಮೂಲಿ ಕಥೆಗಳಾಗಿ ಉಳಿದಿವೆ ಎಂದಿದ್ದಾರೆ. ಮಾರುಕಟ್ಟೆಯ ಅಗತ್ಯತೆಯನ್ನು ಮಾತ್ರ ಕರಾರುವಕ್ಕಾಗಿ ಅರ್ಥಮಾಡಿಕೊಂಡ ಕುಶಲ ಕರ್ಮಿಯೊಬ್ಬನ ಪಳಗಿದ ಕೈಗಳಿಂದ ಸೃಷ್ಟಿಯಾದ ಸರಕಿನಂತೆ ಸರಕಿನಂತೆ ಈ ಕಥೆಗಳಿವೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ರವಿಯವರ ಕೆಲವು ಕಥೆಗಳನ್ನು ಓದಿದಾಗ ಇದು ಸ್ಪಷ್ಟವಾಗುತ್ತದೆ. ತೀರಾ ಇತ್ತೀಚಿಗೆ ಪ್ರಕಟಗೊಂಡ 'ಬರುವನೇನೇ ಸಖಿ ಚೆಲುವ...' ಕಥೆಯನ್ನು ಈ ಗುಂಪಿಗೆ ಸೇರಿಸಬಹುದು. ಕಥೆಗಾರನ ಎಲ್ಲಾ ಕಥೆಗಳು ಉತ್ಕೃಷ್ಟವಾಗಿ ಮೂಡಿಬರಲು ಸಾಧ್ಯವಿಲ್ಲ. ಅಂತೆಯೇ, ರವಿಯವರ ಕೆಲವು ಕಥೆಗಳು ನೀರಸವಾಗಿ ಸೃಷ್ಟಿಯಾಗಿವೆ. ಅದನ್ನು ಪರಿಣಾಮಕಾರಿಯಾಗಿ ಬಂಜಗೆರೆಯವರು ಇಲ್ಲಿ ವಿಮರ್ಶಿಸಿದ್ದಾರೆ. ಈ ಮೇಲೆ ಸೂಚಿಸಿದ ಕಥೆಗಳಲ್ಲಿ 'ಆ ಕಥೆಗಳ ಒಡಲಿನ ಮಹತ್ವಾಕಾಂಕ್ಷೆಯೇ ಕಮ್ಮಿ' ಎಂದಿದ್ದಾರೆ. 'ತೆಲುಗಿನ ಶ್ರೀ ಶ್ರೀ ಹಾಗೂ ಚಲಂರ ಹಾಗೆ ಬೇಕಾಬಿಟ್ಟಿ ಬರವಣಿಗೆಯನ್ನು ಕೆಲವು ಸಲ ರವಿ ಮಾಡಿದ್ದಾರೆ' ಎಂದು ಬಂಜಗೆರೆಯವರು ಗುರುತಿಸಿದ್ದಾರೆ. ರವಿಯವರಿಗೆ ತುಂಬಾ ಇಷ್ಟವಾದ ಹಾಗೂ ಅವರ ಮೇಲೆ ಪ್ರಭಾವ ಬೀರಿದ ಸಾಹಿತಿಗಳಲ್ಲಿ ಶ್ರೀ ಶ್ರೀ ಹಾಗೂ ಚಲಂ ಪ್ರಮುಖರು. ಇವರ ಬರವಣಿಗೆಯ, ವಿಚಾರಧಾರೆಯ ಪ್ರಭಾವ ರವಿಯವರ ಕಥೆಗಳಲ್ಲಿ ಸಹಜವಾಗಿ ಕಾಣಿಸಿಕೊಂಡಿರಬಹುದು. ತೆಲುಗು ಸಾಹಿತ್ಯದಲ್ಲಿ ಗಂಡು-ಹೆಣ್ಣಿನ ಸಂಬಂಧದ ಬಗ್ಗೆ ವ್ಯಾಪಕವಾಗಿ, ಪರಿಣಾಮಕಾರಿಯಾಗಿ ಬರೆದವರೆಂದರೆ 'ಗುಡಿಪಾಟು ವೆಂಕಟಚಲಂ' ಇವರ 'ಮೈದಾನಂ', 'ಅಮೀನಾ' ಇತ್ಯಾದಿ ಕಾದಂಬರಿಗಳನ್ನು ಓದಿದಾಗ ಇದು ವಿದಿತವಾಗುತ್ತದೆ. ಇವರ ಸಾಹಿತ್ಯದ ಪ್ರಮುಖ ವಸ್ತುವೇ ಗಂಡು-ಹೆಣ್ಣಿನ ಸಂಬಂಧ, ಪ್ರೇಮ-ಕಾಮಗಳ ತಾಕಲಾಟ. ರವಿ ಬೆಳಗೆರೆಯವರ 'ಮಿನಾರುಗಳ ಊರಿನಲ್ಲಿ ಅವರು' ಕಥೆಯೊಂದಿಗೆ ಚಲಂ ರ 'ಮೈದಾನಂ' ಕಾದಂಬರಿಯನ್ನು ಹೋಲಿಸಿ ನೋಡಿದಾಗ ರವಿಯವರ ಬರಹದ ಮೇಲೆ ಆದ ಚಲಂ ರ ಪ್ರಭಾವ ಸ್ಪಷ್ಟವಾಗಿ ತಿಳಿದುಬರುತ್ತದೆ. ಚಲಂ ರ ಬಹುತೇಕ ಕಥೆಗಳಲ್ಲಿ ಕೂಡಾ 'ಹೆಣ್ಣು' ಪ್ರಮುಖ ಕಥಾವಸ್ತು. ರವಿಯವರ 'ಶಾಲಿನಿ' ಕಥೆಯಲ್ಲಿ ಚಲಂ ಪ್ರಭಾವವಿರಬಹುದು. ಅದನ್ನೇ ಬಂಜಗೆರೆಯವರು ಇಲ್ಲಿ ಗುರುತಿಸಿದ್ದಾರೆ.

ಕನ್ನಡ ಸಾಹಿತ್ಯ ತನ್ನ ನೆನಪಿನ ಕೋಶದಲ್ಲಿ ಸಂಚಯಿಸಿಕೊಳ್ಳುವ ಅನುಭವಗಳಾಗಬೇಕಾದ ಕಥೆಗಳನ್ನು 'ಒಟ್ಟಾರೆ ಕಥೆಗಳು' ಕಥಾಸಂಕಲನದಲ್ಲಿ ಹುಡುಕಿರುವ ಬಂಜಗೆರೆಯವರು ಪಾ.ವೆಂ. ಹೇಳಿದ ಕಥೆ, ಹೆಣದ ಮನೆಯಲ್ಲಿ, ಮೈಕು, ಹಂತ, ಕತ್ತಲೆ ನೋವು ಮತ್ತು ಹೆಣ, ವಿತಥ, ಪರಿಚಯ, ವೇಷಗಳು, ಮಸೀದಿ ಬಿದ್ದ ಮೂರನೇ ದಿನ, ನೆರಳು ಈ

ಕಥೆಗಳಲ್ಲಿ ನಿರೂಪಿತವಾಗಿರುವ ಜೀವನ ಹಾಗೂ ಅವುಗಳನ್ನು ನಿರೂಪಿಸುವ ಲೇಖನಿಯ ಜೀವನಾನುಭವ ಸಾರ್ಥಕ ಕಥೆಗಳ ಮಾದರಿಯನ್ನು ನಮಗೆ ಪರಿಚಯಿಸುತ್ತವೆ ಎಂದಿದ್ದಾರೆ. ಓದಿನ ದೃಷ್ಟಿಯಿಂದ ರವಿ ಬೆಳಗೆರೆಯವರ ಯಾವ ಕಥೆಗಳೂ ನಮಗೆ ನಿರಾಶೆ ಹುಟ್ಟಿಸುವುದಿಲ್ಲ. ಆದರೆ ಸಾಹಿತ್ಯದ ಗಾಢವಾದ ಅನುಭವವನ್ನು, ಓದಿನ ನಂತರ ಹುಟ್ಟುವ ಚಕಿತತೆಯನ್ನು, ಆಳದ ವಿಷಾದವನ್ನು ಮೂಡಿಸುವ ಸಾಮರ್ಥ್ಯ, ಆ ಮೂಲಕ ನಾಲ್ಕು ಕಾಲ ಬಾಳುವ ಸಾಹಿತ್ಯಿಕ ಮೌಲ್ಯ ಈ ಮೇಲೆ ತಿಳಿಸಿರುವ ಕಥೆಗಳಲ್ಲಿವೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಜಿ. ರಾಜಶೇಖರ್‌ರವರು ತಮ್ಮ ವಿಮರ್ಶಾ ಲೇಖನದಲ್ಲಿ "ಹೆಣದ ಮನೆಯಲ್ಲಿ ಮತ್ತು ಕುಹು ಕುಹರ ಈ ಕಥೆಗಳು ತಮ್ಮ ಅತಿರೇಕದಿಂದಲೇ ಓದುಗರನ್ನು ಜಡಗೊಳಿಸುತ್ತವೆ" ಎಂದಿದ್ದಾರೆ. ಆದರೆ ಇದೇ ಕಥೆಗಳನ್ನು ಬಂಜಗೆರೆಯವರು ವ್ಯಾಖ್ಯಾನಿಸುವುದೇ ಬೇರೆ.

'ವಂಧ್ಯಾ' ಕಥೆಯ ಸಾಂಕೇತಿಕತೆಯ ಬಗ್ಗೆ ಅಚ್ಚರಿ ವ್ಯಕ್ತಪಡಿಸಿರುವ ಬಂಜಗೆರೆಯವರು 'ಯೌವ್ವನಕ್ಕೆ ಪ್ರವೇಶಿಸುತ್ತಿರುವ ಬ್ರಾಹಣರ ಮನೆಯ ಪೂರ್ಣಮ್ಮ ತನ್ನ ಜೊತೆಗಾರರ ಕಾರಣದಿಂದ ಹಸಿ ಮಾಂಸ, ಕೊಳೆತ ಮಾಂಸ ತಿನ್ನುವ ಹದ್ದಾಗಿ ಪರಿವರ್ತಿತವಾಗಿ ಅವರ ಮನೆಯವರೆಲ್ಲರಿಗೆ ಆಘಾತಕಾರಿಯಾಗಿ ಮಾರ್ಪಾಡುವ ಚಿತ್ರಣ ಯಾಕೋ ನಿರಾಶಾವಾದಿಯಾಗಿರುವಂತಿದೆ. ಆಕೆಯ ಲೋಕಾನುಭವ ತೆರೆದುಕೊಳ್ಳುವ ಹಾದಿಯನ್ನು ಆತ್ಮಘಾತುಕತನದ್ದೆನ್ನುವಂತೆ ಚಿತ್ರಿಸಿರುವ ಕಥೆಯ ಧ್ವನಿ ಲೇಖಕರ ಯಾವ ಬಗೆಯ ಧೋರಣೆಯನ್ನು ಬಿಂಬಿಸುತ್ತಿದೆ ಎಂಬ ಪ್ರಶ್ನೆಗಳನ್ನು ಹುಟ್ಟಿಸುತ್ತಿದೆ' ಎಂದಿದ್ದಾರೆ.

ರವಿ ಬೆಳಗೆರೆಯವರ 'ಒಟ್ಟಾರೆ ಕಥೆಗಳ'ನ್ನು ಕುರಿತು ಅಂತಿಮವಾಗಿ ಬಂಜಗೆರೆ ಜಯಪ್ರಕಾಶರವರು ವಿಶ್ಲೇಷಿಸಿರುವುದು ಹೀಗೇ...

'ತಮ್ಮ ವ್ಯವಹಾರಗಳ ನಡುವೆ, ವ್ಯಕ್ತಿತ್ವದ ಅಂಗವಾಗಿರುವ 'ಸೋ ವಾಟ್' ಧೋರಣೆಗಳ ನಡುವೆ ರವಿ ಬೆಳಗೆರೆ ಸ್ವಲ್ಪ ಬಿಡುವು ಮಾಡಿಕೊಂಡರೆ, ತಮ್ಮ ಬದುಕಿನ ಅಪಾರ ಪರಿಶ್ರಮಗಳ ನಡುವೆ, ಮತ್ತಷ್ಟು ಸಾಹಿತ್ಯಿಕ ಮುಲಾಜುಗಳನ್ನು ಹಚ್ಚಿಕೊಂಡರೆ, ಕನ್ನಡಕ್ಕೆ ಮತ್ತೊಬ್ಬ ಮಾಸ್ತಿಯಂತಹ ಕಥೆಗಾರ ದೊರೆಯಬಹುದೆಂಬ ಬಗ್ಗೆ ದಟ್ಟವಾದ ಎಲ್ಲಾ ನಿದರ್ಶನಗಳನ್ನು 'ಒಟ್ಟಾರೆ ಕಥೆಗಳು' ನೀಡುತ್ತವೆ. ಬೆಚ್ಚನೆಯ ಬದುಕಿನ ಸ್ಪರ್ಶ, ಬದುಕಿನ ನಿಗೂಢತೆಯ ಅನಾವರಣ, ವಕ್ರತೆಯ ನಡುವೆಯೂ ಸಹಜತೆಯ ವಿನ್ಯಾಸ ಮುಂತಾದ ಹಲವು ವೈಶಿಷ್ಟ್ಯಗಳನ್ನು 'ರವೀ ಛಾಪಿ'ನೊಂದಿಗೆ ನಮ್ಮ ಮುಂದಿಡುವ ಕಥೆಗಳು ಬೆಳಗೆರೆಯ ಮತ್ತಷ್ಟು ಧ್ಯಾನವನ್ನು, ಗಮನವನ್ನು ಬೇಡುತ್ತಾ, ಆ ನಡುವೆಯೇ ತಮ್ಮ ಶ್ರೇಷ್ಠತೆಯ ಗಡಿಗಳನ್ನೂ ಪ್ರದರ್ಶಿಸುತ್ತಿವೆ'.[೮] ಎಂದಿದ್ದಾರೆ.

ರವಿಯವರ ಕಥೆಗಳನ್ನು ಕುರಿತಂತೆ ಕೆ. ಸತ್ಯನಾರಾಯಣ, ಜಿ. ರಾಜಶೇಖರ್, ಹಾಗೂ ಬಂಜಗೆರೆ ಜಯಪ್ರಕಾಶ್ ಈ ಮೂವರ ವಿಮರ್ಶಾ ಲೇಖನಗಳು ಪರಸ್ಪರ ವಿಭಿನ್ನತೆಯಿಂದ ಕೂಡಿವೆ. ಕಥೆಗಳ ವಿವಿಧ ಭಾಗಗಳನ್ನು ವಿಭಿನ್ನ ಆಯಾಮಗಳಿಂದ ನೋಡಿದ್ದಾರೆ. ಹೀಗಾಗಿ ಪರಿಣಾಮಕಾರಿ ವಿಮರ್ಶೆ ಮೂಡಿಬಂದಿದೆ.

## ಕೊನೆ ಟಿಪ್ಪಣಿ

೧. ಕುಸುಮಾಕರ ದೇವರಗೆಣ್ಣೂರು, ನಿರೀಂದ್ರಿಯ, ದಿವಾಣಜಿ ಪ್ರಕಾಶನ, ಡೊಂಬಿವಿಲಿ, ಠಾಣೆ, ಮಹಾರಾಷ್ಟ್ರ, ೧೯೯೩, (ಮುನ್ನುಡಿ)

೨. ರವಿ ಬೆಳಗೆರೆ, ಪಾ.ವೆಂ. ಹೇಳಿದ ಕಥೆ, ಅಭಿನವ ಪ್ರಕಾಶನ, ಬೆಂಗಳೂರು, ೧೯೯೫, ಪುಟ:೫೭

೩. ಮಾವಿನಕೆರೆ ರಂಗನಾಥನ್(ಸಂ), ಕಥಾಗುಚ್ಛ, ಮಾಸ್ತಿ ಶತಮಾನೋತ್ಸವ ಸಮಿತಿ, ಬೆಂಗಳೂರು, ೧೯೯೨, ಪುಟ–xi

೪. ದ ಸಂಡೇ ಇಂಡಿಯನ್ (ಕನ್ನಡ ಪಾಕ್ಷಿಕ ಪತ್ರಿಕೆ) ಸಂಚಿಕೆ: ೦೭,ಮಾರ್ಚ್ ೨೦೧೦ (೭೬ನೇ ಕನ್ನಡ ಸಾಹಿತ್ಯ ಸಮ್ಮೇಳನ ವಿಶೇಷಾಂಕ)

೫. ರುಜುವಾತು (ತ್ರೈಮಾಸಿಕ ಪತ್ರಿಕೆ) ಸಂಚಿಕೆ: ಜುಲೈ–ಸೆಪ್ಟಂಬರ್: ೧೯೯೫

೬. ರವಿ ಬೆಳಗೆರೆ ಪಾ.ವೆಂ. ಹೇಳಿದ ಕಥೆ, ಅಭಿನವ ಪ್ರಕಾಶನ, ಬೆಂಗಳೂರು, ೧೯೯೫, (ಮುನ್ನುಡಿ)

೭. ಅದೇ ಕೃತಿ, (ಮುನ್ನುಡಿ)

೮. ಬಂಜಗೆರೆ ಜಯಪ್ರಕಾಶ, ಉಲಿಯ ಉಯ್ಯಲೆ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫, ಪುಟ:೧೫೦



## ಅಧ್ಯಾಯ ೩

# ರವಿ ಬೆಳಗೆರೆಯವರ ಕಥೆಗಳ ಕಥಾವಸ್ತು ಮತ್ತು ಭಾಷೆ

ರವಿ ಬೆಳಗೆರೆಯವರು ಬರೆದಿರುವ ಕಥೆಗಳು ಸಂಖ್ಯಾ ದೃಷ್ಟಿಯಿಂದ ಕಡಿಮೆ ಎನಿಸಿದರೂ ಅವುಗಳ ವಿಭಿನ್ನ ಕಥಾವಸ್ತು ಮತ್ತು ಭಾಷೆ ಓದುಗರ ಗಮನ ಸೆಳೆಯುತ್ತವೆ. ಗಂಡು ಹೆಣ್ಣಿನ ಸಂಬಂಧ, ರಿಕ್ತತೆ, ಬಡತನದ ಕರಾಳತೆ, ಮಾನವೀಯ ಮೌಲ್ಯಗಳು, ಸಾಮಾಜಿಕ ಶೋಷಣೆ, ನಿರೀಂದ್ರಿಯತೆ, ಜೋಗಪ್ಪ–ಜೋಗತಿಯರ ಬದುಕಿನ ಬವಣೆ, ಪ್ರೀತಿ–ಪ್ರೇಮಗಳ ಹಾಗೂ ದಾಂಪತ್ಯದ ಪರಿಕಲ್ಪನೆ, ವಿಕ್ಷಿಪ್ತತೆ, ಮಾನವೀಯ ಸಂಬಂಧಗಳು, ಕೌಟುಂಬಿಕ ಸಂಬಂಧಗಳು ಇತ್ಯಾದಿಗಳೇ ರವಿಯವರ ಕಥೆಗಳ ಕಥಾವಸ್ತುವಾಗಿವೆ.

ಕಥಾವಸ್ತು ರೂಪಗೊಳ್ಳುತ್ತಾ ಹೋದಂತೆ ಅದರೊಂದಿಗೆ ಸಹಜವಾಗಿ ಭಾಷೆ, ತಂತ್ರ, ನಿರೂಪಣೆ ಮುಂತಾದ ಅಂಶಗಳು ಅಳವಡುತ್ತಾ ಸಾಗುತ್ತವೆ. ರವಿಯವರ ಕಥೆಗಳ ಭಾಷೆಯಲ್ಲಿ ಹೊಸತನ, ಸ್ವಂತಿಕೆ ಇದೆ. ಭಾಷೆಯ ಮೂಲಕ ಭಾವನೆಗಳ ಅತೀ ಸೂಕ್ಷ್ಮತೆ ಮತ್ತು ಭಾಷೆಯ ಜೀವಂತಿಕೆಯನ್ನು ದುಡಿಸಿಕೊಳ್ಳುವ ಕಲೆ ರವಿಯವರಿಗಿದೆ. ಸಾಹಿತ್ಯ ಪ್ರಕಾರವೊಂದರಲ್ಲಿ ವಸ್ತು ಮತ್ತು ಭಾಷೆ ಪರಸ್ಪರ ಅವಲಂಬಿಸಿಯೇ ಇರುತ್ತದೆ.

### ಕಥಾವಸ್ತು

'ಕಥೆಗೆ ಘನ ರೂಪವನ್ನು ಕೊಡುವುದೇ ಕಥಾವಸ್ತು. ಕಥಾವಸ್ತುವನ್ನು ಕಥೆಯಿಂದ ಪ್ರತ್ಯೇಕಿಸುವುದು ಸಾಧ್ಯವಿಲ್ಲವಾದರೂ ವಿಚಾರದ ಅನುಕೂಲಕ್ಕಾಗಿ ಅದನ್ನು ಒಂದು ಭಿನ್ನ ವಿಶಿಷ್ಟವೆಂದು ನೋಡಬಹುದು. ಸಾಹಿತಿಯ ಮನಸ್ಸಿನಲ್ಲಿ ಕಥೆಯು ರೂಪಗೊಂಡು ಬೆಳೆದು ಅಂತಿಮ ಅಭಿವ್ಯಕ್ತಿಯನ್ನು ಪಡೆದು ನಿಲ್ಲುವತನಕ ನಡೆಯುವ ಪ್ರಕ್ರಿಯೆಯನ್ನು ಅವಲೋಕಿಸಿದರೆ ಅವುಗಳ ಪರಸ್ಪರ ಸಂಬಂಧವು ತಿಳಿಯುತ್ತದೆ. ಒಟ್ಟಿನಲ್ಲಿ ಕಥಾನಕದಲ್ಲಿ ಸೇರಬೇಕಾದ, ಬೆಳೆಯಬೇಕಾದ ಘಟನೆಗಳನ್ನು, ಕ್ರಿಯೆಗಳನ್ನು ನಿರ್ಣಯಿಸುವುದು ಹಾಗೂ ಕಥೆಗೆ

ವಾಸ್ತವತೆಯನ್ನು ಕೊಟ್ಟು ಅದರ ಅಂತಸ್ಸತ್ವವಾಗುವುದು ಕಥಾವಸ್ತುವೇ ವಿನಾ ಕಥೆಯಲ್ಲ'.[೧] ಈ ಹಿನ್ನೆಲೆಯಲ್ಲಿ ರವಿಯವರ ಒಟ್ಟು ಕಥೆಗಳಲ್ಲಿನ ಕಥಾವಸ್ತುವನ್ನು ಹೀಗೆ ವಿಶ್ಲೇಷಿಸಬಹುದು.

ರವಿಯವರ ಮೊದಲ ಪ್ರಕಟಿತ ಕಥೆ **'ಶಾಲಿನಿ'**ಯಲ್ಲಿ ದಾಂಪತ್ಯವೇ ಕಥಾವಸ್ತು. ಪರಸ್ಪರ ಪ್ರೀತಿಸಿ ಮದುವೆಯಾದ ಕಥಾನಾಯಕಿ ಶಾಲಿನಿ ಹಾಗೂ ಅವಳ ಗಂಡ, ಮದುವೆಯ ನಂತರ ಕ್ರಮೇಣ ಅವಳಲ್ಲಿ ಆಸಕ್ತಿ ಕಳೆದುಕೊಂಡು ಪಕ್ಕದ ಮನೆಯ ಹುಡುಗಿಯತ್ತ ಆಕರ್ಷಿತನಾಗುತ್ತಾನೆ. ಇದನ್ನು ಅವನ ಡೈರಿಯಿಂದ ತಿಳಿದುಕೊಳ್ಳುವ ಶಾಲಿನಿ ಪತ್ರವೊಂದನ್ನು ಬರೆದು ತಾನು ಮೂರು ತಿಂಗಳ ಗರ್ಭಿಣಿಯೆಂದು ತಿಳಿಸಿ ತವರಿಗೆ ಹೊರಟು ಬಿಡುತ್ತಾಳೆ. ನಂತರ ಅವಳ ಗಂಡ ಆ ಪತ್ರ ಓದಿ ತನ್ನ ತಪ್ಪಿನ ಅರಿವಾಗಿ ತನ್ನ ಹೆಂಡತಿಯನ್ನು ಮರಳಿ ಮನೆಗೆ ಕರೆತರುತ್ತಾನೆ. ದಂಪತಿಗಳ ಪುನರ್ ಮಿಲನದಲ್ಲಿ ಕಥೆ ಕೊನೆಯಾಗುತ್ತದೆ.

ರವಿಯವರ ಒಟ್ಟು ಕಥೆಗಳಲ್ಲಿಯೇ ತುಂಬಾ ವಿಭಿನ್ನವಾದ ವಸ್ತುವಿನಿಂದ ಗಮನ ಸೆಳೆಯುವ ಕಥೆ **'ವಂಧ್ಯಾ'**. ಕರಿಗೆರೆಯ ಬ್ರಾಹ್ಮಣ ಮನೆಯ ಹುಡುಗಿ ಪೂರ್ಣಿ ಹದ್ದುಗಳ ಸ್ನೇಹ ಸಂಪಾದಿಸಿ ಹಂತ ಹಂತವಾಗಿ ತಾನೇ ಹದ್ದಾಗಿ ಮಾರ್ಪಡುವ ಭಯಾನಕ ಸ್ಥಿತಿ ಈ ಕಥೆಯದ್ದು. ಪೂರ್ಣಪ್ರಮಾಣದ ಹದ್ದಾಗಿ ಮನೆ ಬಿಟ್ಟು ಹೋಗುವ ಪೂರ್ಣಿ, ನಂತರ ಇಡೀ ಕರಿಗೆರೆ ಭೀಕರ ಬರಗಾಲಕ್ಕೆ ತುತ್ತಾದಾಗ ತನ್ನ ಗೆಳೆಯ ಹದ್ದುಗಳೊಂದಿಗೆ ಬಂದು ತನ್ನ ತಮ್ಮ ಗೋಪಿಯನ್ನೇ ತಿನ್ನಲು ಬರುವ ದೃಶ್ಯ ಘೋರವಾದದ್ದು. ಈ ಕಥೆ ವಿಶ್ವ ಪ್ರಸಿದ್ಧ ಜೆಕ್ ಕಥೆಗಾರ ಕಾಫ್ಕಾನ 'ದಿ ಮೆಟಾ ಮಾರ್ಫಸಿಸ್' ಕಥೆಯನ್ನು ನೆನಪಿಸುತ್ತದೆ. 'ಪಾಶ್ಚಾತ್ಯ ಜಗತ್ತಿನ ಅದ್ಭುತ ಕಥೆಗಳಲ್ಲಿ ಇದೊಂದು. ಕಥೆಯ ಮೊದಲ ವಾಕ್ಯ "ಗ್ರಿಗರ್ ಸುಸ ಒಂದು ದಿನ ಬೆಳಿಗ್ಗೆ ಮುಜುಗರ ಮೂಡಿಸುವ ಕನಸುಗಳಿಂದ ಎಚ್ಚೆತ್ತವನು ತನ್ನ ಹಾಸಿಗೆಯಲ್ಲಿ ತಾನು ಒಂದು ಬೃಹದಾಕಾರದ ಹುಳುವಾಗಿ ರೂಪಾಂತರ ಹೊಂದಿರುವುದನ್ನು ಕಂಡ" ಈ ಮನುಷ್ಯನಿಗೆ ಬೆನ್ನಿಗೆ ಲೋಹ ಕವಚ ಹಾಕಿದಂತೆ ಭಾಸವಾಗುತ್ತದೆ. ಕಂದು ಬಣ್ಣದ ಹೊಟ್ಟೆ ಉಬ್ಬಿಕೊಂಡಿದೆ. ಅನೇಕ ಕಾಲುಗಳು ಹುಟ್ಟಿಕೊಂಡಿವೆ. ಅವನೊಂದು ದೈತ್ಯಾಕಾರದ ಹುಳುವಾಗಿ ಬಿಟ್ಟಿದ್ದಾನೆ. ಇದರಿಂದ ಅವನಿಗೂ ಅವನ ಸಂಸಾರದವರಿಗೂ ಇದ್ದ ಬಾಂಧವ್ಯ ರೂಪಾಂತರಗೊಳ್ಳುವುದು. ಬರಬರುತ್ತ ಅವರ ಅಸಡ್ಡೆ, ಅವನು ಬಾಗಿಲತ್ತ ಬಂದಾಗ ಅವರೇ ಹೊಡೆದಟ್ಟುವುದು, ಅವನ ಸಾವು–ಈ ಮೈನಡುಗಿಸುವ ಕಥೆಯನ್ನು ಕಾಫ್ಕ ಹೇಳುತ್ತಾನೆ. ಬಾಳಿನಲ್ಲಿ ಯಾವುದೋ ಸಮಯದಲ್ಲಿ ಮನುಷ್ಯನಿಗೆ ತಾನು ತಬ್ಬಲಿ ಎನ್ನುವ ಭಾವನೆ ಬರುತ್ತದೆ. ಹೀಗಾದಾಗ ಮನುಷ್ಯ–ಮನುಷ್ಯರ ನಡುವೆ ಸಂಪರ್ಕ ಮುರಿದು ಬೀಳುತ್ತದೆ. ಈ ಸ್ಥಿತಿ ಈ ಕಥೆಯಲ್ಲಿ ಭಾಷೆಯ ರೂಪ ಪಡೆದಿದೆ'.[೨] ಈ ಕಥೆಯ ಕಥಾನಾಯಕ ಗ್ರಿಗರ್ ಸುಸ ಒಂದೇ ರಾತ್ರಿಯಲ್ಲಿ ಹುಳುವಾಗಿ ಮಾರ್ಪಾಡು ಹೊಂದುತ್ತಾನೆ. ಆದರೆ 'ವಂಧ್ಯಾ' ಕಥೆಯಲ್ಲಿ ಪೂರ್ಣಿ ಹಂತ ಹಂತವಾಗಿ ಹದ್ದಾಗಿ ಪರಿವರ್ತನೆಯಾಗುತ್ತಾಳೆ.

ಹೋಟೆಲ್ ಕಾರ್ಮಿಕರ ಶೋಷಣೆಯನ್ನು ಬಿಂಬಿಸುವ ಕಥೆ **'ದಾರಿ'**. ಹೋಟೆಲಿನಲ್ಲಿ ಮಾಣಿಯಾಗಿ ಕೆಲಸ ಮಾಡುವ ಕಥಾನಾಯಕ ಮಂಜ ಅದೇ ಹೋಟೆಲಿನ ಮ್ಯಾನೇಜರ್ ಪಟ್ಟಣಶೆಟ್ಟಿಯ ವಿಕೃತ ಸಲಿಂಗಕಾಮಕ್ಕೆ ಬಲಿಯಾಗಿ ಅನುಭವಿಸುವ ಮನೋವೇದನೆಗಳು ಇಲ್ಲಿ ಚಿತ್ರಣಗೊಂಡಿವೆ. ಕಥೆಯ ಕೊನೆಯ ಈ ದುಷ್ಟ ವ್ಯವಸ್ಥೆಯ ವಿರುದ್ಧ ಹೋಟೆಲು ಕಾರ್ಮಿಕರು ಪ್ರತಿಭಟಿಸುತ್ತಾರೆ. ರವಿಯವರ ಮೊದಲ ಕಥಾ ಸಂಕಲನ 'ದಾರಿ'ಯ ಪ್ರಮುಖ ಕಥೆ 'ದಾರಿ'ಯೇ ಆಗಿರುವುದರಿಂದ ಕಥಾ ಸಂಕಲನದ ಶೀರ್ಷಿಕೆ ಕೂಡಾ ಅದೇ ಆಗಿದೆ. ಈ ಕಥಾಸಂಕಲನದ ಮುನ್ನುಡಿಯಲ್ಲಿ ಈ ಕಥೆಯ ಸೃಷ್ಟಿಯ ಬಗ್ಗೆ ರವಿಯವರು ಹೀಗೆ ಹೇಳಿದ್ದಾರೆ... 'ಅಂದು ನಾಲ್ಕು ವರ್ಷಗಳ ಹಿಂದೆ ಉತ್ತರ ಪ್ರದೇಶದ ಹೋಟೆಲ್ಲೊಂದರಲ್ಲಿ ಸಾಮಾನ್ಯ ಕಾರ್ಮಿಕವಾಗಿ ನನ್ನ ಗುಂಪಿನವರ ಹಕ್ಕುಗಳಿಗಾಗಿ ಬಡಿದಾಡುತ್ತಿದ್ದಾಗ ಕಥೆ ಬರೆಯುವ ಉದ್ದೇಶವಿರಲಿಲ್ಲ. ಮುಂದೆ ಬದುಕಿನ ದಾರಿ ಬೇರೆತ್ತಲೋ ಒಯ್ದಾಗ ಹಳೆಯ ನೆನಪುಗಳು ಹಲವಾರು ಕಲ್ಪನೆಗಳೊಂದಿಗೆ ಕೂಡಿ ಒಂದು ಕಥೆಯಾಗಿ ಲೇಖನಿಗೆ ಹರಿದು, ಅಚ್ಚಿನ ಮೊಳೆಗಳಿಗೆ ಸರಿದು ಈ ಸಂಕಲನದ ತಲೆಬರಹವಾಗಿ ಕುಳಿತು ಬಿಟ್ಟಿದೆ'.[೩] ಎಂದಿದ್ದಾರೆ.

ಈ ಕಥಾಸಂಕಲನವನ್ನು ಹೋಟೆಲು ಕಾರ್ಮಿಕರಿಗೆ ಅರ್ಪಿಸಿರುವ ರವಿಯವರು ಅರ್ಪಣೆಯಲ್ಲಿ 'ಅನಿಶ್ಚಿತ ಬದುಕಿನ ಕತ್ತಲು ದಾರಿಗಳಲ್ಲಿ ಸಾಗುತ್ತಾ ಶೋಷಣೆಗೊಳಗಾಗುತ್ತಿರುವ ಎಲ್ಲ ಹೋಟೆಲು ಕಾರ್ಮಿಕರ ಹೋರಾಟದ ಬೆಂಬಲವಾಗಿ ಈ ಪುಟ್ಟ ಕಾಣಿಕೆಯನ್ನು ಅರ್ಪಿಸುತ್ತಿದ್ದೇನೆ' ಎಂದಿದ್ದಾರೆ. ಕಾರ್ಮಿಕರ ಬಗೆಗಿನ ಪ್ರೀತಿ, ಕಳಕಳಿ ಇಲ್ಲಿ ವ್ಯಕ್ತವಾಗಿವೆ. ರವಿ ಬೆಳಗೆರೆಯವರ ಪ್ರಗತಿಶೀಲ ಬರವಣಿಗೆಯ ಮೊದಲ ಸೃಷ್ಟಿಯೇ ಈ ಕಥೆಯಾಗಿದೆ.

ಹೆಂಡತಿಯೊಂದಿಗಿನ ದಾಂಪತ್ಯ, ಪ್ರೇಯಸಿಯೊಂದಿಗಿನ ಪ್ರೇಮ ಇವುಗಳನ್ನು ವಿವರಿಸುವ ಕಥೆ **'ಸತ್ಯಭಾಮೆಯ ತೆಕ್ಕೆಯಿಂದ'**. ಹದಿನಾಲ್ಕು ವರ್ಷಗಳ ಹೆಂಡತಿಯೊಂದಿಗಿನ ಸಂಸಾರವನ್ನು ತೊರೆದು ಪ್ರೇಯಸಿಯೆಡೆಗೆ ಹೋಗುವ ಕಥಾನಾಯಕ ಪ್ರೇಯಸಿಯ ಅತಿಯಾದ ಭಾವುಕತೆ, ಉಸಿರು ಕಟ್ಟಿಸುವಂಥ ಪ್ರೀತಿ, ಅವನ ಜೀವನ ವಿಧಾನವನ್ನೇ ಬದಲಾಯಿಸುವ ಅವಳ ಸತತ ಪ್ರಯತ್ನ ಇವುಗಳಿಂದ ಬೇಸತ್ತು, ತಾನು ತನ್ನ ಹೆಂಡತಿಯನ್ನು ಬಿಟ್ಟು ಬಂದದ್ದು ತಪ್ಪೆಂದು ಅರಿವಾಗಿ ಮರಳಿ ಹೆಂಡತಿಯಲ್ಲಿಗೆ ಹೋಗುತ್ತಾನೆ. ಆದರೆ ಅಲ್ಲಿ ಅವಳು ತನ್ನ ಮಕ್ಕಳೊಂದಿಗೆ ಯಾರೊಂದಿಗೋ ಊರು ಬಿಟ್ಟು ಹೋಗಿರುತ್ತಾಳೆ. ತುಂಬಾ ನೀರಸವೆನಿಸುವ ಈ ಕಥೆಯನ್ನು ಕುರಿತು ಬಂಜಗೆರೆ ಜಯಪ್ರಕಾಶರವರು 'ಇವು ಕೇವಲ ಕುಶಲ ಕರ್ಮಿಯೊಬ್ಬನ ಪಳಗಿದ ಕೈಗಳಿಂದ ಹೊಮ್ಮಿದ ಸರಕುಗಳಾಗಿ ಬಿಟ್ಟಿವೆ' ಎಂಬ ಮಾತನ್ನು ಇಲ್ಲಿ ಗಮನಿಸಬಹುದು.

'ಮಯೂರ' ಮಾಸ ಪತ್ರಿಕೆಯಲ್ಲಿ 'ಮಹಾ ಸ್ವಪ್ನಾ' ಎಂಬ ಗುಪ್ತನಾಮದಡಿಯಲ್ಲಿ ಪ್ರಕಟವಾದ ಕಥೆ **'ಮಿನಾರುಗಳ ಊರಿನಲ್ಲಿ ಅವರು'**. ರವಿಯವರ ಮೇಲೆ ತುಂಬಾ ಪ್ರಭಾವ

ಬೀರಿದ ತೆಲುಗು ಲೇಖಕ 'ಗುಡಿಪಾಟಿ(ಟು) ವೆಂಕಟ ಚಲಂ. ಅವರ 'ಮೈದಾನಂ' ಕಾದಂಬರಿಯನ್ನು ಈ ಕಥೆ ಹೋಲುತ್ತಿರುವುದು ಕಂಡುಬರುತ್ತದೆ. ಈ ಕಾದಂಬರಿಯ ಪ್ರಭಾವ ಅಥವಾ ಪ್ರೇರಣೆ 'ಮಿನಾರುಗಳ ಊರಿನಲ್ಲಿ ಅವರು' ಕಥೆಯ ಮೇಲೆ ಆಗಿರಬಹುದೇ ಎನಿಸುತ್ತದೆ. 'ಮೈದಾನಂ' ಕಾದಂಬರಿಯಲ್ಲಿ ನಾಯಕಿ 'ರಾಜೇಶ್ವರಿ' ವಿವಾಹಿತೆ. ಆದರೂ ತನ್ನ ಪ್ರಿಯತಮನ ಪ್ರೀತಿಗೋಸ್ಕರ ಶ್ರೀಮಂತ ವಕೀಲ ಗಂಡನನ್ನೇ ತೊರೆದು ತನ್ನ ಪ್ರಿಯತಮ 'ಅಮೀರ'ನೊಂದಿಗೆ ಹೆಜ್ಜೆ ಹಾಕುತ್ತಾಳೆ. ಗೋದಾವರಿ ನದಿ ತೀರದಲ್ಲಿ ಇವರ ಪ್ರಣಯ ಜೀವನ ಆರಂಭವಾಗುತ್ತದೆ. ಇದರಲ್ಲಿ 'ಮೀರಾ' ಎಂಬ ಮೂರನೇ ಪಾತ್ರವೂ ಇದೆ. ಇವೇ ಮೂರೇ ಇಲ್ಲಿ ಪ್ರಮುಖ ಪಾತ್ರಗಳು.

'ಮಿನಾರುಗಳ ಊರಿನಲ್ಲಿ ಅವರು' ಕಥೆಯಲ್ಲೂ ನಾಯಕಿ ತನ್ನ ಶ್ರೀಮಂತ ಗಂಡನ ಕಣ್ತಪ್ಪಿಸಿ ಪ್ರಿಯಕರನೊಂದಿಗೆ ಓಡಿ ಬರುತ್ತಾಳೆ. 'ಮೈದಾನಂ'ದಲ್ಲಿ ಗೋದಾವರಿ ನದಿ ತೀರದಲ್ಲಿ ಅವರ ಪ್ರೇಮದ ಅನಾವರಣವಾಗಿದ್ದರೆ, 'ಮಿನಾರುಗಳ ಊರಿನಲ್ಲಿ ಅವರು' ಕಥೆಯಲ್ಲಿ ಗೋರಿ, ಮಿನಾರು, ಶಿಥಿಲ ಕಟ್ಟಡಗಳ ಮಧ್ಯೆ ನಡೆಯುತ್ತದೆ. ಮೂರನೇ ಪಾತ್ರ ಇಲ್ಲಿಲ್ಲ. ಇವೆರಡೇ ಇಲ್ಲಿ ಪ್ರಮುಖ ಪಾತ್ರಗಳು. ಈ ಪಾತ್ರಗಳಿಗೆ ಹೆಸರೇ ಇಲ್ಲದಿರುವುದನ್ನು ಇಲ್ಲಿ ಗಮನಿಸಬಹುದು. ಇಂತಹ ಕೆಲವೊಂದು ಅಂಶಗಳೇ 'ಮೈದಾನಂ' ಕಾದಂಬರಿಯಿಂದ ಕೊಂಚ ಮಟ್ಟಿಗೆ ವಿಭಿನ್ನವಾಗಿ ಕಾಣಬಹುದು.

ರೋಮ್ಯಾಂಟಿಕ್ ಶೈಲಿಯ **'ಕೊನೆ'** ಕಥೆಯಲ್ಲಿ ರವಿ ಬೆಳಗೆರೆಯವರು ತಮ್ಮನ್ನು ತಾವೇ ಕಥಾನಾಯಕನನ್ನಾಗಿಸಿ ತಮ್ಮದೇ ಹೆಸರಿನ ಪಾತ್ರವಾಗಿ ಚಿತ್ರಿಸಿಕೊಂಡಿದ್ದಾರೆ. ಅಪಾರ್ಟ್‌ಮೆಂಟ್‌ವೊಂದರಲ್ಲಿ ವಾಸಿಸುವ ಕಥೆಗಾರ ರವಿ ಬೆಳಗೆರೆ ಅವಿವಾಹಿತ. ಅದೇ ಅಪಾರ್ಟ್‌ಮೆಂಟ್‌ನಲ್ಲಿರುವ ಜೋಸೆಫೀನ್ ಎಂಬ ಕ್ರಿಶ್ಚಿಯನ್ ಹುಡುಗಿಯ ಮೊಣಕಾಲ ಸೌಂದರ್ಯಕ್ಕೆ ಮನಸೋತು ಅವಳನ್ನು ಪ್ರೀತಿಸಲಾರಂಭಿಸುತ್ತಾನೆ. ತನ್ನ ಎದೆಯೊಳಗಿನ ಪ್ರೀತಿಯನ್ನು ಹೇಳಿಕೊಳ್ಳಲಾರದೇ ಚಡಪಡಿಸುತ್ತಾನೆ. ಅವಳೊಂದಿಗಿನ ಸ್ನೇಹ ಸಾಧ್ಯವಾದರೂ, ಪ್ರೀತಿ ಈಚೆಗೆ ಬರುವುದಿಲ್ಲ. ತನ್ನ ಪ್ರೀತಿಯನ್ನು ಹೇಳಿಕೊಳ್ಳಬೇಕೆನ್ನುವ ಸಂದರ್ಭದಲ್ಲಿಯೇ ಅವನ ಶ್ರೀಮಂತ ಮಿತ್ರ ಅಜಯ್‌ಕುಮಾರ ಪಾಟೀಲನ ಅನುಚಿತ ವರ್ತನೆಗೆ ಸಿಟ್ಟಾಗುವ ಅವಳು ರವಿ ಬೆಳಗೆರೆಯೊಂದಿಗಿನ ಸಂಪರ್ಕವನ್ನು ಕಡಿದುಕೊಳ್ಳುತ್ತಾಳೆ. ಇದರಿಂದ ಮನನೊಂದ ಕಥಾನಾಯಕ ಆ ಅಪಾರ್ಟ್‌ಮೆಂಟ್‌ನ್ನೇ ಬಿಟ್ಟು ಹೊರಡಬೇಕೆನ್ನುವ ತೀರ್ಮಾನಕ್ಕೆ ಬಂದು ಕೊನೆ ಬಾರಿಗೆ ಅವಳನ್ನು ಭೇಟಿ ಮಾಡಿ ತನ್ನ ಪ್ರೇಮ ನಿವೇದನೆಯನ್ನು ಮಾಡಿಕೊಳ್ಳಬೇಕು ಎಂಬ ತೀರ್ಮಾನಕ್ಕೆ ಬರುತ್ತಾನೆ. ಅವಳ ಮನೆಯ ಕರೆಗಂಟೆ ಒತ್ತಿದಾಗ ಬಿಚ್ಚಿಕೊಳ್ಳುವ ಬಾಗಿಲ ಹಿಂದೆ ಕಥೆಗಾರನ ಮಿತ್ರ ಅಜಯ್‌ಕುಮಾರ ಪಾಟೀಲ್‌ನ ಬೆನ್ನಿಗಾನಿಸಿಕೊಂಡು ಜೋಸೆಫೀನ್ ನಿಂತಿರುತ್ತಾಳೆ. ಅವನ ಶ್ರೀಮಂತಿಕೆ ಜೋಸೆಫೀನ್ ಮಾರು ಹೋಗಿರುತ್ತಾಳೆ. ಇದನ್ನೆಲ್ಲಾ ನೋಡುವ ಕಥೆಗಾರ ಅದನ್ನೇ ಒಂದು ಕಥೆಯನ್ನಾಗಿ ಬರೆಯತೊಡಗುತ್ತಾನೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್‌ರವರ ಒಂದೆರಡು ಕಥೆಗಳನ್ನು ಹೊರತುಪಡಿಸಿದರೆ

ಕಥಾನಾಯಕ ತನ್ನದೇ ಹೆಸರಿನಲ್ಲಿ ಕಥೆಯ ಪಾತ್ರವಾಗಿ ಚಿತ್ರಿಸಿಕೊಳ್ಳುವ ಬಗೆ ಕನ್ನಡ ಕಥಾಲೋಕದಲ್ಲಿ ವಿರಳ. ಈ ಹಿನ್ನೆಲೆಯಲ್ಲಿ ರವಿಯವರ 'ಕೊನೆ' ಕಥೆ ತನ್ನ ವೈಶಿಷ್ಟ್ಯತೆಯಿಂದ ಗುರುತಿಸಿಕೊಳ್ಳುತ್ತದೆ. ಇಂಗ್ಲಿಷ್‌ನಲ್ಲಿ ಖುಷ್‌ವಂತ್ ಸಿಂಗ್‌ರು ಇದೇ ಮಾದರಿಯಲ್ಲಿ ಕೆಲವು ಕಥೆಗಳನ್ನು ಬರೆದಿದ್ದಾರೆ.

ತೊನ್ನಿನಿಂದ ಬಳಲುವ ವ್ಯಕ್ತಿಯ ಮಾನಸಿಕ ತೊಳಲಾಟಗಳನ್ನು ಚಿತ್ರಿಸುವ ಕಥೆ **'ಬದುಕೊಂದು ಸತತ ಅಭ್ಯಾಸ'**. ಕಥಾನಾಯಕ ರಾಜ್‌ನ ಬೆನ್ನ ಮೇಲೆ ಪುಟ್ಟ ಚುಕ್ಕೆಯಾಗಿ ಕಾಣಿಸುವ ತೊನ್ನು ಕ್ರಮೇಣ ದೇಹಾದ್ಯಂತ ವ್ಯಾಪಿಸಿಕೊಳ್ಳತೊಡಗುತ್ತದೆ. ಇದರಿಂದ ಅವನನ್ನು ತುಂಬಾ ಪ್ರೀತಿಸುವ ಪ್ರೇಯಸಿ ಸುಷ್ಮಾ ದೂರವಾಗುತ್ತಾಳೆ. ಮನೆಯವರೊಂದಿಗಿನ ಅಂತರ ಹೆಚ್ಚಾಗುತ್ತಾ ಹೋಗುತ್ತದೆ. ಖಿನ್ನತೆ ಅವನನ್ನು ಆವರಿಸಿಕೊಳ್ಳುತ್ತದೆ. ಅವನು ನೌಕರಿ ಮಾಡುವ ಕೆ.ಇ.ಬಿ. ಕಛೇರಿ ಅವನನ್ನು ಜೋಗಕ್ಕೆ ವರ್ಗಾಯಿಸುತ್ತದೆ. ಅಲ್ಲಿಯ ಹೊಸ ವಾತಾವರಣದಲ್ಲಿ, ಹಸಿರಿನ ಮಧ್ಯೆ ನೆಮ್ಮದಿಯನ್ನು ಕಾಣುತ್ತಾನಾದರೂ ಅಂತರ್ಮುಖಿಯಾಗಿ ಹೋಗುತ್ತಾನೆ. ಅವನನ್ನು ಹುಡುಕೊಂಡು ಜೋಗಕ್ಕೆ ಬರುವ ಸುಷ್ಮಾಳ ಗೆಳತಿ ವೀಣಾ ಅವನ ಬದುಕಿನಲ್ಲಿ ಸ್ಫೂರ್ತಿ, ಭರವಸೆಗಳನ್ನು ತುಂಬುತ್ತಾಳೆ. ಕಥೆಗಾರ ವಸುಧೇಂದ್ರರ 'ಮನೀಷೆ' ಕಥಾ ಸಂಕಲನದಲ್ಲಿಯ ಕಥೆ 'ನಮ್ಮ ವಾಜೀನೂ ಆಟಕ್ಕೆ ಸೇರಿಸ್ಕೊಳ್ರೋ' ಕಥೆಯೂ ತೊನ್ನಿನ ಸಮಸ್ಯೆಯನ್ನೇ ಕೇಂದ್ರವಾಗಿಟ್ಟುಕೊಂಡು ರಚನೆಯಾಗಿದೆ. ಕಥೆಯ ಕಥಾನಾಯಕ ಬಾಲಕ ವಾಜಿಗೆ ತೊನ್ನು ಪ್ರಾರಂಭವಾದಾಗ ಸುತ್ತಲಿನ ಸಮಾಜ ಅವನನ್ನು ದೂರವಿಡಲು ಪ್ರಯತ್ನಿಸುತ್ತದೆ. ಅವನ ತಾಯಿ ವಿಧವೆ ಕಮಲಮ್ಮ ಬ್ರಾಹ್ಮಣರಿಗೆ ತನ್ನ ಮಗನಿಂದ ಅಲಂಕಾರದ ಅಡುಗೆ ಬಡಿಸಬೇಕೆಂಬ ಕನಸು ಕಾಣುತ್ತಾಳೆ. ಅದಕ್ಕಾಗಿ ಅವಳು ಪಡುವ ಶ್ರಮ, ಕಷ್ಟ, ಪ್ರಯತ್ನಗಳೆಲ್ಲಾ ಕೊನೆಗೆ ವಿಫಲವಾಗುವ ಸನ್ನಿವೇಶ ಓದುಗರಲ್ಲಿ ಆರ್ದ್ರ ಭಾವವನ್ನುಂಟುಮಾಡುತ್ತದೆ.

ಸಾರಿಗೆ ಸಂಸ್ಥೆಯಲ್ಲಿ ಕೆಲಸ ಮಾಡುವ ನೌಕರನೊಬ್ಬನ ದುರಂತ ಕಥೆಯನ್ನು **'ಮೈಕು'** ಕಥೆ ಬಿಚ್ಚಿಡುತ್ತದೆ. ಬಸ್ಸುಗಳು ಬರುವ ಹಾಗೂ ಹೊರಡುವ ಬಗ್ಗೆ ಮೈಕು ಮೂಲಕ ಅನೌನ್ಸ್‌ಮೆಂಟ್ ಮಾಡುವ ಕಥಾನಾಯಕ ವೀರಸಂಗಣ್ಣ ನಾಗಪ್ಪ ಹೂಗಾರ ತನ್ನ ಹೆಂಡತಿಯ ಸಾವಿನಿಂದ ಏಕಾಂಗಿಯಾಗಿ ವಿಕ್ಷಿಪ್ತನಂತಾಗುತ್ತಾನೆ. ಮೈಕ್ ಮೂಲಕ ವಿಚಿತ್ರ ರೀತಿಯ ಅನೌನ್ಸ್‌ಮೆಂಟ್ ಮಾಡಲಾರಂಭಿಸುತ್ತಾನೆ. ಇವನ ಮಾತು ಕೇಳಲೆಂದೇ ಜನರು ಕಂಟ್ರೋಲ್ ರೂಮ್‌ನ ಸುತ್ತಾ ನೆರೆಯಲಾರಂಭಿಸುತ್ತಾರೆ. ಇದರಿಂದ ಸಮಸ್ಯೆಗೊಳಗಾದ ಸಾರಿಗೆ ಅಧಿಕಾರಿಗಳು ಅವನಿಗೆ ಮೆಮೋ ಕೊಟ್ಟರೂ, ನೋಟಿಸ್ ಕೊಟ್ಟರೂ ಅದನ್ನು ನಿರ್ಲಕ್ಷಿಸುತ್ತಾನೆ. ಕೊನೆಗೆ ಅವನ ಮೈಕ್‌ಗೂ, ಲೌಡ್‌ಸ್ಪೀಕರ್‌ಗೂ ಇರುವ ಸಂಪರ್ಕ ತೆಗೆದು ಹಾಕುತ್ತಾರೆ. ಅವನಾಡುವ ಮಾತು ಜನರಿಗೆ ಕೇಳುವುದಿಲ್ಲ. ಇದರ ಸತ್ಯ ಗೊತ್ತಾದ ನಂತರ ಮಾನಸಿಕ ಸ್ಥಿಮಿತ ಕಳೆದುಕೊಳ್ಳುವ ಹೂಗಾರ ತನ್ನ ನೌಕರಿಯನ್ನೇ ತೊರೆದು,

ಪತ್ರಿಕೆಯನ್ನು ಸುರುಳಿ ಮಾಡಿ ಅದನ್ನೇ ಮೈಕ್ ಎಂಬಂತೆ ಮಾತನಾಡತೊಡಗುತ್ತಾನೆ. ಹೀಗೆ ಈ ಕಥೆ ವಿಷಾದದ ಅಂತ್ಯದಲ್ಲಿ ಕೊನೆಗೊಳ್ಳುತ್ತದೆ.

ಜೋಗಪ್ಪ-ಜೋಗತಿಯರ ವಿಚಿತ್ರ ಪ್ರಪಂಚ, ಅವರ ಬದುಕು ಬವಣೆಗಳನ್ನು ಎಳೆ ಎಳೆಯಾಗಿ ಬಿಡಿಸಿಡುವ ಕಥೆ **'ಹಂತ'**. ಮೈಮೇಲಿನ ಒಡವೆಗಳಿಗಾಗಿ ದುರಾಸೆಪಡುವ ಫಕೀರಪ್ಪ ತನ್ನ ಹೆಂಡತಿ ಜೋಗತಿಯಾಗಿರುವ ರೇಣುಕಮ್ಮನನ್ನು ಕೊಂದು, ಒಡವೆ ದೋಚಿಕೊಂಡು ತನ್ನ ಮಗಳು ಯಲ್ಲಿಯೊಂದಿಗೆ ಹುಲಿಗಿಗೆ ಬರುತ್ತಾನೆ. ಜೋಗತಿಯರೊಂದಿಗೆ ದೇಹ ಸಂಬಂಧ, ಮಿತಿಮೀರಿದ ಕುಡಿತದಿಂದ ತನ್ನ ಪುರುಷತ್ವವನ್ನೇ ಕಳೆದುಕೊಂಡು ತಾನೂ ಜೋಗಪ್ಪನಾಗಿ ಪರಿವರ್ತನೆ ಹೊಂದುತ್ತಾನೆ. ತನ್ನ ಹೊಟ್ಟೆಪಾಡಿಗಾಗಿ ತನ್ನ ಮಗಳು ಯಲ್ಲಿ (ಯಲ್ಲವ್ವ)ನನ್ನು ಜೋಗತಿಯನ್ನಾಗಿ ಮಾಡಲು ಒತ್ತಾಯದಿಂದ ಅವಳಿಗೆ ಮುತ್ತು ಕಟ್ಟಿಸುತ್ತಾನೆ. ಹೊರ ಜಗತ್ತಿಗೆ ಷಂಡನೆಂದೇ ಬಿಂಬಿಸಲ್ಪಡುವ ಜೋಗಪ್ಪ ಯಂಕಟಪ್ಪ ಪುರುಷತ್ವ ಹೊಂದಿರುವವನು. ಇವನ ಬಲಾತ್ಕಾರಕ್ಕೆ ಒಳಗಾಗುವ ಯಲ್ಲಿ ಕೊನೆಗೆ ಇವನೊಂದಿಗೆ ತನ್ನ ಬದುಕಿನ ಹೊಸ ದಿನಗಳನ್ನು ಹಂಚಿಕೊಳ್ಳುತ್ತಾಳೆ. 'ದಾರಿ' ಕಥಾಸಂಕಲನದಲ್ಲಿಯ ಈ ಕಥೆಯ ಸೃಷ್ಟಿಯ ಬಗ್ಗೆ ಕಥೆಗಾರರು ಕೃತಿಯ ಮುನ್ನುಡಿಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ... 'ಉತ್ತಮ ಜೀವಕೋಶಗಳನ್ನು ಹೊಂದಿದ ಮನುಷ್ಯನನ್ನು ಹೊಲಸಿಗೆ ತಳ್ಳುವ ಧರ್ಮಕ್ಕೆ, ಕೆಲವು ಕೀಳು ಜಾತಿಗಳಷ್ಟೇ ಅನ್ವಯಿಸುವ ಕ್ರೂರ ಜೀವನ ನಿಯಮಗಳಿಗೆ, ಗೊಡ್ಡು ಸಂಪ್ರದಾಯಗಳಿಗೆ ನನ್ನ ನೆಲದ ಜನರಿನ್ನೂ ಅಂಟಿಕೊಂಡಿದ್ದಾರಲ್ಲಾ ಎಂಬ ನೋವಿನ ಅನಿಸಿಕೆ ಮತ್ತೊಂದು ಕಥೆಯಾಯಿತು. ನನ್ನ ಊರಿಗೆ ನಲವತ್ತೇ ಮೈಲು ದೂರದಲ್ಲಿ ಒಂದು ವಿಚಿತ್ರ ಪ್ರಪಂಚವನ್ನು ಸೃಷ್ಟಿ ಮಾಡಿಕೊಂಡು, ದೇವರುಗಳ ಹಾದರದ ಕಥೆಗಳನ್ನು ತಮ್ಮ ರಾತ್ರಿ ಮತ್ತು ಹಗಲುಗಳ ಹೊಲಸು ಬದುಕಿಗೆ ಅಳವಡಿಸಿಕೊಂಡು ಬದುಕುವ ಜೋಗತಿಯರನ್ನು ಕಂಡವರಿಗೆಲ್ಲಾ ಈ ನೋವು ಸಹಜ. ಈ ಕಥೆಯ ಪಾತ್ರಗಳು ಇಂದಿಗೂ ಜೀವಂತ'[9] ಎಂದಿದ್ದಾರೆ.

ಹೆಂಡತಿಯೆಡೆಗೆ ಸೆಳೆತ, ತಾಯಿಯ ಬಗೆಗಿನ ಪ್ರೀತಿ, ಇವುಗಳ ನಡುವೆ ಇರುವ ಕಥಾನಾಯಕನ ಪರಿಸ್ಥಿತಿ ಇವುಗಳನ್ನೆಲ್ಲಾ ಚಿತ್ರಿಸುವುದೇ **'ನೆರಳು'** ಕಥೆ. ಕಥಾನಾಯಕ ಅನಂತರಾಮು ತಾಯಿಯ ಬಲವಂತಕ್ಕೆ ಮದುವೆಯಾಗುತ್ತಾನೆ. ಅವನ ತಾಯಿಗೆ ಪದೇ ಪದೇ ಏನಾದರೂ ವಸ್ತುವನ್ನು ಕದಿಯುವ ಅಭ್ಯಾಸ. ಇವೆಲ್ಲದರ ನಡುವೆ ತೀರಾ ಚಿಕ್ಕದಾದ ಆ ಮನೆಯಲ್ಲಿಯೇ ಆಕೆ ಮಲಗುವುದರಿಂದ ಹೆಂಡತಿಯೊಂದಿಗಿನ ಸುಖದ ರಾತ್ರಿಗಳು ದೂರಗುತ್ತವೆ. ಒಮ್ಮೆ ಯಾರೋ ಕೊಟ್ಟಿದ್ದ ಸ್ವೆಟರ್‌ವೊಂದನ್ನು ಮನೆಗೆ ತರುವ ಆಕೆ, ಯಾರದೋ ಮನೆಯಲ್ಲಿ ಕದ್ದುಕೊಂಡು ಬಂದಿರಬೇಕು ಎಂದು ಭಾವಿಸುವ ಅನಂತರಾಮುವಿನ ಹೆಂಡತಿ ಜ್ಯೋತಿ ಅವಳಿಗೆ ಹೊಡೆಯುತ್ತಾಳೆ. ಇದರಿಂದ ಕ್ಷುದ್ರಗೊಂಡ ಅನಂತನ ತಾಯಿ ಅವನ ಮನೆಗೆ ಶಪಿಸಿ ಮನೆ ಬಿಟ್ಟು ಹೊರಟು, ಊರೂರು ಅಲೆದು ಮತ್ತೇ ಅದೇ

ಊರಿಗೆ ಬಂದು ಗುಡಿಯೊಂದರಲ್ಲಿ ವಾಸಮಾಡುತ್ತಾಳೆ. ಕೊನೆಗೆ ಅನಾಥವಾಗಿ ಗುಡಿಯಲ್ಲಿಯೇ ಸಾಯುತ್ತಾಳೆ. ಅವಳ ಸಾವಿಗೆ ಯಾವ ಪ್ರತಿಕ್ರಿಯೆಯನ್ನು ತೋರಿಸದ ಅನಂತನ ಮನಸ್ಸು ನಿಷ್ಕ್ರಿಯವಾಗುತ್ತದೆ. ನಂತರ ಹುಟ್ಟುವ ಅವನ ಮಗು ಕೂಡಾ ಬೇರೆಯವರ ಮನೆಯ ಆಟಿಕೆಗಳನ್ನು ಕದಿಯಲು ಪ್ರಾರಂಭಿಸುವುದರೊಂದಿಗೆ ಕಥೆ ಅಂತ್ಯವಾಗುತ್ತದೆ.

ಸಂಶಯ ಸ್ವಭಾವದ, ಜಿಪುಣಾಗ್ರೇಸ ಗಂಡನ ವಂಚನೆಗೆ ಬಲಿಯಾಗುವ ಹೆಣ್ಣೊಬ್ಬಳ ಬದುಕಿನ ವ್ಯಥೆಯನ್ನು ತೆರೆದಿಡುವ ಕಥೆ **'ಪಾ.ವೆಂ. ಹೇಳಿದ ಕಥೆ'**. ಕಥಾನಾಯಕಿ ಅಂಬುಜಾ ತನ್ನ ಗಂಡ ವಸುಧೇಂದ್ರಾಚಾರ್ಯನ ಮೋಸಕ್ಕೆ ಒಳಗಾಗುತ್ತಾಳೆ. ತಾನು ಆಫೀಸ್‌ನಲ್ಲಿ ಗುಮಾಸ್ತನಾಗಿದ್ದೇನೆಂದು ಹೇಳಿಕೊಳ್ಳುವ ಅವನು ಚಪರಾಸಿಯಾಗಿದ್ದು ಕೇವಲ ಏಳನೇ ತರಗತಿ ಓದಿದವನಾಗಿರುತ್ತಾನೆ. ಅಂಬುಜಾಳಿಗಿಂತ ಮೊದಲೇ ಏಳು ವರ್ಷಗಳ ಮುಂಚೆಯೇ ಅವನಿಗೆ ಮದುವೆಯಾಗಿರುತ್ತದೆ. ಹಾಗೂ ಅವನ ಮೊದಲ ಹೆಂಡತಿ ಬದುಕಿರುತ್ತಾಳೆ. ಮೊದಲನೇ ಮದುವೆಯಾದ ಎರಡೇ ವರ್ಷಕ್ಕೆ ಅವನಿಗೆ ತಾನು ಸಂತಾನ ಸೃಷ್ಟಿಯ ಸಾಮರ್ಥ್ಯವನ್ನು ಕಳೆದುಕೊಂಡಿರುವ ವಿಷಯ ಗೊತ್ತಾಗಿರುತ್ತದೆ. ಇವೆಲ್ಲವನ್ನು ತನ್ನ ಗಂಡನ ಮೊದಲ ಹೆಂಡತಿಯ ತಂದೆ ಕ್ರಿಷ್ಣಾಚಾರ್ಯ ಬಿಂದಿಗೆಯಿಂದ ತಿಳಿಯುವ ಅಂಬುಜಾಳ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲವುಂಟಾಗುತ್ತದೆ. ಆದರೂ ತನ್ನ ಭಾವೋದ್ವೇಗಗಳನ್ನು ಅದುಮಿಟ್ಟುಕೊಂಡು ತನ್ನ ಗಂಡನನ್ನೇ ತೊರೆದು ಹೊಸ ಬದುಕು ಆರಂಭಿಸುತ್ತಾಳೆ.

ಗರ್ಭದೊಳಗಿನ ಭ್ರೂಣದ ಮಾತುಗಳನ್ನು ವಿವರಿಸುವ ಕಥೆ **'ಭ್ರೂಣ ಸಂಭಾಷಣೆ'**. ಅಮೀನಾಳಿಗೆ ಗಂಡನಿದ್ದರೂ ಅವಳ ಹೊಟ್ಟೆಯೊಳಗಿನ ಭ್ರೂಣದ ಸೃಷ್ಟಿಕರ್ತ ಅವಳ ಗಂಡನಲ್ಲ, ಅದು ಕಬ್ಬಿಣದ ಬಳೆ ತೊಟ್ಟ ಫಕೀರನದು. ಅವನ ವರದಿಂದಲೇ ಭ್ರೂಣ ಸಂಭಾಷಿಸಲಾರಂಭಿಸುತ್ತವೆ. ಒಮ್ಮೆ ಮಧ್ಯಾಹ್ನದ ಹೊತ್ತು ಅಮೀನಾಳ ಮನೆಗೆ ಹಸಿದುಕೊಂಡು ಬರುವ ಫಕೀರನಿಗೆ ಊಟ ಬಡಿಸಿದ ನಂತರ ಅವಳೊಂದಿಗೆ ದೈಹಿಕ ಸಂಪರ್ಕಕ್ಕಾಗಿ ಕೈ ಚಾಚುತ್ತಾನೆ. ತನಗೊಂದು ಮಗು ಬೇಕು ಎನ್ನುವ ಅಮೀನಾ, ಅವನೊಂದಿಗಿನ ಉನ್ಮತ್ತ ಕ್ರಿಯೆಯ ಸೃಷ್ಟಿಯೇ ಈ ಭ್ರೂಣ. ಅಲೆಮಾರಿಯಾದ ಫಕೀರ ಅವಳ ಮನೆಯಿಂದ ಹೊರಡಲು ಸಿದ್ಧನಾದಾಗ ಅವನನ್ನು ತಡೆಯುವ ಅಮೀನಾ, 'ನೀನು ಇಲ್ಲೇ ನನ್ನೊಂದಿಗೆ ಇರು, ನೀನು ಹೋದ ನಂತರ ನಾನು ಯಾರೊಂದಿಗೆ ಮಾತನಾಡಲಿ?' ಎಂದು ಕೇಳುತ್ತಾಳೆ. 'ನಿನ್ನ ಕೂಸಿನೊಂದಿಗೆ ಮಾತಾಡು' ಎಂದು ಹೇಳಿ ಹೊರಡುತ್ತಾನೆ ಫಕೀರ. 'ಅಮ್ಮೀಜಾನ್' ಎಂದು ಭ್ರೂಣ ಕೂಗಿಕೊಳ್ಳುತ್ತದೆ. ಅಮೀನಾಳ ಗೆಳತಿ ವಸಂತಳ ಮುಚ್ಚಿಟ್ಟ ಮನಸ್ಸಿನ ಬಯಕೆಗಳನ್ನು, ಅವಳ ಹೊಟ್ಟೆಯೊಳಗಿನ ಮಗುವಿನ ಸ್ಥಿತಿಯನ್ನು ತೆರೆದಿಡುತ್ತದೆ. ಕಥೆಯ ಅಂತ್ಯದಲ್ಲಿ ಮತ್ತೆ ಪ್ರತ್ಯಕ್ಷನಾಗುವ ಫಕೀರ ಅವಳೊಂದಿಗೆ ಹೆಜ್ಜೆ ಹಾಕುತ್ತಾನೆ. ಈ ಕಥೆಯ ಕಬ್ಬಿಣದ ಬಳೆ, ಸರಪಳಿಯನ್ನು ತೊಟ್ಟ ಫಕೀರನ ಯಥಾವತ್ ಚಿತ್ರಣ ರವಿಯವರ 'ಒಮರ್ಟಾ' ಕಾದಂಬರಿಯಲ್ಲೂ ಕಂಡುಬರುತ್ತದೆ. 'ಭ್ರೂಣ ಸಂಭಾಷಣೆ' ಕಥೆಯಲ್ಲಿ ಅಮೀನಾಳೊಂದಿಗೆ ದೈಹಿಕ ಸಂಬಂಧ ಹೊಂದುವ ಫಕೀರ, ಅವಳಿಗೆ ಮಗು ಬೇಕೆಂಬ

ಅಪೇಕ್ಷೆಗೆ ಭ್ರೂಣ ಸೃಷ್ಟಿಸುತ್ತಾನೆ. 'ಒಮರ್ಟಾ' ಕಾದಂಬರಿಯಲ್ಲಿ ಯಳ್ಳಾರ್ತಿಯಲ್ಲಿ ಪ್ರತಿವರ್ಷ ನಡೆಯುವ ಮುಸುಲರ ಉರುಸ್‌ಗೆ ಹೋದ ಮಾದಿಗರ ಮಾದೇವಿಯೊಂದಿಗೆ ಜಮಾಲಿ ಗುಡ್ಡದ ಇಳಿಜಾರಿನಲ್ಲಿದ್ದ ಕುಸುಬೆ ಹೊಲದಲ್ಲಿ, ಆಗಷ್ಟೇ ಪಸರಿಸಿದ ಗಾಢ ಕತ್ತಲೆಯಲ್ಲಿ ಅವಳೊಂದಿಗೆ ದೈಹಿಕ ಮಿಲನ ಹೊಂದುತ್ತಾನೆ. ಈ ಮಿಲನದ ಸೃಷ್ಟಿಯೇ 'ಜೀವಾ' ಎಂಬ ದೈತ್ಯದೇಹಿಯ ಜನನವಾಗುತ್ತದೆ. ಎದೆಗೆ ಸರಪಳಿ ಸುತ್ತಿಕೊಂಡು, ತೋಳಿಗೆ ಕಬ್ಬಿಣದ ಬಳೆಯೇರಿಸಿಕೊಂಡ ಫಕೀರನ ಇಡೀ ಚಿತ್ರಣ 'ಒಮರ್ಟಾ' ಕಾದಂಬರಿ ಮತ್ತು 'ಭ್ರೂಣ ಸಂಭಾಷಣೆ' ಕಥೆಯಲ್ಲಿ ಒಂದೇ ರೀತಿಯಾಗಿ ಮೂಡಿ ಬಂದಿರುವುದನ್ನು ಕಾಣಬಹುದು.

ಸರ್ಕಾರಿ ಆಸ್ಪತ್ರೆಯಲ್ಲಿ ಹೆಣ ಕೊಯ್ಯುವವನ ಬದುಕು, ಡಾಕ್ಟರ್‌ನ ಲಂಚಕೋರತನ, ಆಸ್ಪತ್ರೆಯ ಅವ್ಯವಸ್ಥೆ ಇವುಗಳನ್ನೆಲ್ಲ ಚಿತ್ರಿಸುವ ಕಥೆ **'ಹೆಣದ ಮನೆಯಲ್ಲಿ'**. ಕಥಾನಾಯಕ ನಾರಾಣಿ ಸತ್ತ ಹೆಣಗಳನ್ನು ತನ್ನ ಡಾಕ್ಟರ್ ಕೆಂಚಪ್ಪನ ಆದೇಶದಂತೆ ಕೊಯ್ಯುತ್ತಾನೆ. ಹದಿನೈದು ವರ್ಷಗಳ ಹಿಂದೆ ಹೆಂಡತಿಯನ್ನು ಕಳೆದುಕೊಂಡು ಏಕಾಂಗಿಯಾಗುವ ನಾರಾಣಿಗೆ ಆಸ್ಪತ್ರೆಯೇ ಮನೆಯಾಗಿ ಹೋಗಿದೆ. ಅವನಿಗೆ ಭಯ, ಸಡಗರ, ಕುತೂಹಲ, ವೇದನೆ ಯಾವುದೂ ಇಲ್ಲ. ಆಸ್ಪತ್ರೆಯ ಡಾಕ್ಟರ್ ಕೆಂಚಪ್ಪ 'ಹೆಣದ ಮ್ಯಾಗಿನ ರೊಕ್ಕ ತಿಂಬೋನು' ಎಂದೇ ಕುಖ್ಯಾತನಾದವನು. ಪ್ರತಿ ಪೋಸ್ಟ್‌ಮಾರ್ಟಂಗೂ ಹೆಣದ ವಾರಸುದಾರರ ಹತ್ತಿರ ಹಣ ಸುಲಿಯುತ್ತಾನೆ. ಮಗುವೊಂದರ ಪೋಸ್ಟ್‌ಮಾರ್ಟಂಗೂ ಮಗುವಿನ ತಂದೆಯ ಹತ್ತಿರ ಹಣ ಕೀಳುವ ಡಾಕ್ಟರ್ ಸಿನೆಮಾಕ್ಕೆ ಹೋಗುವ ಆತುರದಲ್ಲಿರುತ್ತಾನೆ. ಪೋಸ್ಟ್‌ಮಾರ್ಟಂ ನ ನಂತರ ನಾರಾಣಿಗೆ ಅಶ್ಲೀಲ ಬೈಗುಳವೊಂದನ್ನು ಬೈಯುವ ಡಾಕ್ಟರ್‌ನೊಂದಿಗೆ ನಾರಾಣಿ ಜಗಳಕ್ಕೆ ಬೀಳುತ್ತಾನೆ. ಆಸ್ಪತ್ರೆಯ ತನ್ನ ಕೆಲಸವನ್ನೇ ತೊರೆದು ಬಿಡಬೇಕೆನ್ನುವ ತೀರ್ಮಾನಕ್ಕೆ ಬರುವ ನಾರಾಣಿ, ಹೋಗುವ ಮುಂಚೆ ಡಾ. ಕೆಂಚಪ್ಪನಿಗೆ ಚೆನ್ನಾಗಿ ಬೈಯ್ದು ಹೋಗಬೇಕೆಂದು ಸಾರಾಯಿ ಕುಡಿದು ಅವನ ಮನೆಗೆ ಹೋಗುತ್ತಾನೆ. ಸಿನೆಮಾ ನೋಡಲು ಹೋದ ಡಾಕ್ಟರ್ ಇನ್ನು ಬಂದಿರುವುದಿಲ್ಲ. ಸಿನೆಮಾ ನೋಡಿಕೊಂಡು ತನ್ನ ಸ್ಕೂಟರ್‌ನಲ್ಲಿ ಮರಳುವ ಡಾಕ್ಟರ್ ಲಾರಿಯಡಿಗೆ ಸಿಲುಕಿ ಸಾಯುತ್ತಾನೆ. ಅವನ ಮನೆಯ ಮುಂದೆಯೇ ಕಾಯುವ ನಾರಾಣಿಗೆ ತನ್ನ ಡಾಕ್ಟರ್‌ನ ಸಾವಿನ ಸುದ್ದಿ ತಲುಪುತ್ತದೆ. ಎಲ್ಲಾ ಹೆಣಗಳಂತೆ ಇದೂ ಒಂದು ಹೆಣ ಎಂದು ಭಾವಿಸುವ ನಾರಾಣಿ ಕೆಂಚಪ್ಪನ ಶವದ ಪಕ್ಕದಲ್ಲಿಯೇ ಮಲಗಿ ನಿದ್ರೆ ಹೋಗುತ್ತಾನೆ. ಸರ್ಕಾರಿ ಆಸ್ಪತ್ರೆಯಲ್ಲಿನ ಲಂಚದ ವಿವಿಧ ಮುಖಗಳು ಇಲ್ಲಿ ಅನಾವರಣಗೊಂಡಿವೆ. ಹೆಣದ ವಾರಸುದಾರರು ಅಳುವುದು ನಿಂತರೆ ಸಾಕು ಎಂದು ಚಡಪಡಿಸುವ ಜಮೇದಾರ ಮಾಮೂಲು ಕಸಿಯಲು ಸಿದ್ಧನಾಗಿರುತ್ತಾನೆ. ಹೆಣ ತಂದ ಸ್ಟ್ರೆಚರ್ ನೆಲಕ್ಕಿಳಿಸುವ ಮೊದಲೇ ವಾರ್ಡ್‌ಬಾಯ್ ಪೆಂಚಲಯ್ಯ ತನ್ನ ಮಾಮೂಲಿ ಕಿತ್ತುಕೊಂಡಿರುತ್ತಾನೆ. ಇನ್ನು ಡಾಕ್ಟರ್ ಕೆಂಚಪ್ಪನ ಕೈ ಬಿಸಿ ಮಾಡದಿದ್ದರೆ ಪೋಸ್ಟ್‌ಮಾರ್ಟಂ ರೂಂಗೆ ಕಾಲಿಡುವುದಿಲ್ಲ. ಟೈಂ ಆದ ಮೇಲೆ ಪೋಸ್ಟ್‌ಮಾರ್ಟಂ ಮಾಡಬಾರ್ದು ಎಂಬ ರೂಲ್ಸು ಹೇಳುತ್ತಾನೆ. ಮತ್ತೆ ಮರು ಮುಂಜಾನೆಯ ತನಕ ಕಾಯಿಸಿ ಮತ್ತೊಂದು ನೂರು

ರೂಪಾಯಿ ಕಿತ್ತುಕೊಂಡೇ ಹೆಣಕ್ಕೆ ಚೂರಿ ಹಾಕುತ್ತಾನೆ. ಹೆಣದ ವಾರಸುದಾರರ ಹತ್ತಿರ ಪೊಲೀಸರೂ ಕಿತ್ತು ತಿನ್ನುತ್ತಾರೆ. ಇವೆಲ್ಲದರ ನಡುವೆ ಹೆಣದ ವಾರಸುದಾರರ ಕಣ್ಣೀರಿಗೆಲ್ಲಿಯ ಕೊನೆ? ಎಂದು ಕಥೆಗಾರರು ಪ್ರಶ್ನಿಸುತ್ತಾರೆ.

ವಿಪರೀತ ಭಾವುಕ ಸ್ವಭಾವದ ವಿನಾಕಾರಣ ಅನುಮಾನ ಪಡುವ ಹುಡುಗಿಯೊಬ್ಬಳ ಪ್ರೇಮದ ಕಥೆ **'ಹೀಗೊಬ್ಬಳು ಸೀತಾದೇವಿ'**. ಕಥಾನಾಯಕಿ ಸೀತಾದೇವಿ ಕಾಲೇಜು ವಿದ್ಯಾರ್ಥಿನಿ. ಪರಮ ಶ್ರೀಮಂತೆ, ಸುಂದರಿಯಾದ ಅವಳು ಅವಿನಾಶ್ ರೆಡ್ಡಿ ಎಂಬ ಹುಡುಗನನ್ನು ಪ್ರೀತಿಸುತ್ತಾಳೆ. ಪ್ರತಿ ಸಂಜೆ ಬೈಕ್‌ನಲ್ಲಿ ಅವನೊಂದಿಗೆ ಸುತ್ತಾಟ. ಅದನ್ನೇ ತನ್ನ ರೂಂ ಮೇಟ್ ಅಪರ್ಣಾಳಿಗೆ ಹೇಳಿ ಹೇಳಿ ಖುಷಿಪಡುತ್ತಾಳೆ. ಅಪರ್ಣಾಳಿಗೆ ಚಿಕ್ಕದೊಂದು ಜ್ವರ ಬಂದಾಗ ಅತಿಯಾದ ಕಾಳಜಿ ವಹಿಸಿ ಶುಶ್ರೂಶೆ ಮಾಡುತ್ತಾಳೆ. ಸೀತಾದೇವಿ ಕೆಟ್ಟವಳೇನಲ್ಲ, ಆದರೆ ಅವಳ ಪ್ರೀತಿಯೇ ಹಾಗೆ: ಬಲವಾಗಿ ಅಪ್ಪಕೊಂಡ ಕರಡಿ ಮುತ್ತುಕೊಟ್ಟ ಹಾಗೆ. ಇದೇ ಕಾರಣಕ್ಕಾಗಿ ತನ್ನ ಪ್ರೀತಿಯನ್ನೇ ಕಳೆದುಕೊಳ್ಳುತ್ತಾಳೆ. ಅವರಿಬ್ಬರನ್ನು ರಾಜಿ ಮಾಡಲು ಅವಿನಾಶ ರೆಡ್ಡಿ ಹತ್ತಿರ ಬರುವ ಅಪರ್ಣಾಳಿಗೆ ತನ್ನ ಬಗ್ಗೆಯೇ 'ಅಪರ್ಣಾ, ಪ್ರೊಫೆಸರ್ ತುಷಾರ್‌ನೊಂದಿಗೆ ಮದುವೆಯಾಗುತ್ತಾಳೆ' ಎಂಬ ಅನುಮಾನವನ್ನು ಅವಿನಾಶ್ ರೆಡ್ಡಿಯಲ್ಲಿ ಹೇಳಿಕೊಂಡಿರುವ ವಿಷಯ ಗೊತ್ತಾಗುತ್ತದೆ. ಗೆಳತಿಯ ಬದಲಾಗದ ಸ್ವಭಾವಕ್ಕೆ ಅಪರ್ಣಾ ಸುಮ್ಮನಾಗುತ್ತಾಳೆ. ಹೆಣ್ಣಿನ ಅತಿಯಾದ ಪ್ರೀತಿಯ ಸ್ವರೂಪವನ್ನು ರವಿಯವರು ಇಲ್ಲಿ ಸೊಗಸಾಗಿ ಚಿತ್ರಿಸಿದ್ದಾರೆ. ಎಸ್.ಎಲ್. ಭೈರಪ್ಪನವರ 'ಅಂಚು' ಕಾದಂಬರಿಯ ನಾಯಕಿಯ ಸ್ವಭಾವವನ್ನು ಸೀತಾದೇವಿಯ ಪಾತ್ರ ನೆನಪಿಸುತ್ತದೆ.

ಅಯೋಧ್ಯೆಯಲ್ಲಿ ಬಾಬ್ರಿ ಮಸೀದಿಯನ್ನು ಕೆಡವಿದಾಗ ಆದ ಪರಿಣಾಮದ ಚಿಕ್ಕ ತುಣುಕನ್ನು ವಿವರಿಸುವ ಕಥೆ **'ಮಸೀದಿ ಬಿದ್ದ ಮೂರನೇ ದಿನ'**. ಬಳ್ಳಾರಿ ಹತ್ತಿರದ ಅವುಟಾಳು ಗ್ರಾಮದ ಕುರುಬರ ಉರುಕುಂದಪ್ಪನ ಮಗ ಗುರುಸಾಂತ, ಅದೇ ಗ್ರಾಮದ ಉಪ್ಪಾರ ಅನುಮಂತಜ್ಜನ ಮೊಮ್ಮಗಳು ಸಾಯಿತ್ರಿಯೊಂದಿಗೆ ಊರು ಬಿಟ್ಟು ಬೆಂಗಳೂರಿಗೆ ಬರುತ್ತಾನೆ. ಈ ಹಿಂದೆ ಬಳ್ಳಾರಿಯಲ್ಲಿ ಪರಿಚಯವಾದ ಅತ್ತಾರ್‌ಸಾಬು ಬೆಂಗಳೂರಿನಲ್ಲಿ ಸೆಕ್ಯೂರಿಟಿ ಗಾರ್ಡ್ ಆಗಿ ಕೆಲಸ ಮಾಡುತ್ತಿರುತ್ತಾನೆ. ಅವನ ಹತ್ತಿರ ಬರುವ ಗುರುಸಾಂತನಿಗೆ ಅತ್ತಾರ್‌ಸಾಬು ಇರಲಿಕ್ಕೆ ಗುಡಿಸಲು ವ್ಯವಸ್ಥೆ, ನೀರಿನ ವ್ಯವಸ್ಥೆ ಮಾಡಿಕೊಟ್ಟು ತಾನು ಕೆಲಸ ಮಾಡುವ ಕಂಪೆನಿಯಲ್ಲೇ ಗಾರ್ಡ್ ಕೆಲಸವನ್ನು ಕೊಡಿಸುತ್ತಾನೆ. ನಿರಂತರವಾಗಿ ರಾತ್ರಿ ಪಾಳಿಯ ಕೆಲಸಕ್ಕೆ ಒಳಗಾಗುವ ಗುರುಸಾಂತನಿಗೆ ತನ್ನ ಹೆಂಡತಿಯೊಂದಿಗೆ ಅತ್ತಾರ್‌ಸಾಬು ಅನೈತಿಕ ಸಂಬಂಧ ಹೊಂದುತ್ತಿರಬಹುದೇ? ಎಂಬ ಯೋಚನೆ ಅವನನ್ನು ಕೊರೆಯುತ್ತಿರುತ್ತದೆ. ಅಯೋಧ್ಯೆಯಲ್ಲಿ ಬಾಬ್ರಿ ಮಸೀದಿಯನ್ನು ಕೆಡವಿದ ನಂತರ ದೇಶಾದ್ಯಂತ ಉದ್ರಿಕ್ತ ವಾತಾವರಣ ಸೃಷ್ಟಿಯಾಗುತ್ತದೆ. ಮಸೀದಿ ಬಿದ್ದ ಮೂರನೇ ದಿನ ಬೆಳಿಗ್ಗೆ ಡ್ಯೂಟಿಗೆಂದು ಹೊರಡುವ ಅತ್ತಾರ್‌ಸಾಬು ಗಲಭೆಯಲ್ಲಿ ಕೊಲ್ಲಲ್ಪಡುತ್ತಾನೆ. ಅವನ ಹೆಂಡತಿ ಮಕ್ಕಳು ಅನಾಥರಾಗುತ್ತಾರೆ. ಈ ಕಥೆಯನ್ನು ಕುರಿತಂತೆ ಕಥೆಗಾರ ಕೆ. ಸತ್ಯನಾರಾಯಣರು 'ಅಯೋಧ್ಯೆಯಲ್ಲಿ ಚರಿತ್ರೆ

ನಿರ್ಮಿಸುತ್ತೇವೆಂದೇ ಹೊರಟವರಿಗೆ ಗುರುಸಾಂತನ ಕಥೆ ಖಂಡಿತ ಕಂಡಿರಲಾರದು. ಚರಿತ್ರೆಗಾಗಿ ಮಾತ್ರ ಕೆಲಸ ಮಾಡುವವರಿಗೆ ಗುರುಸಾಂತನೊಬ್ಬನ ಹೆಂಡತಿಯ ಪ್ರೀತಿ, ಸುಖದ ಆಸೆ ಹೇಗೆ ತಿಳಿದೀತು? ಅವರಿಗೆ ಇದನ್ನೆಲ್ಲಾ ತಿಳಿಯುವಷ್ಟು ಬುದ್ಧಿವಂತಿಕೆ, ಸೂಕ್ಷ್ಮತೆ ಇರುವುದಿಲ್ಲವೆಂದಲ್ಲ, ಅಗಾಧವಾಗಿರುತ್ತದೆ. ಆದರೆ ಇಂತಹ ಕಥೆಯನ್ನೆಲ್ಲಾ ಕಾಣುವ ವ್ಯವಧಾನ, ಹೃದಯವಂತಿಕೆ ಇರುವುದಿಲ್ಲ. (ಅವರು) ಹೇಗಾದರೂ ಹಾಳಾಗಿ ಹೋಗಲಿ ಅಂದುಕೊಂಡರೆ, ಗುರುಸಾಂತನಂಥವರ ಅಮಾಯಕ ಜೀವನವನ್ನು, ಬದುಕನ್ನು ಕೂಡಾ ಅವರ ಚರಿತ್ರೆಯ ನಿರ್ಮಾಣದ ಪ್ರಯತ್ನಗಳು ದುರಂತವಾಗಿಯೇ ಪ್ರವೇಶಿಸುತ್ತವೆ.[೫] ಎಂದು ಹೇಳಿರುವುದನ್ನು ಇಲ್ಲಿ ಗಮನಿಸಬಹುದು.

ನಿವೃತ್ತಿಯ ಅಂಚಿಗೆ ಸಮೀಪಿಸಿರುವ ಬಡ ಮುಸ್ಲಿಂ ಪೇದೆಯೊಬ್ಬನ ಬದುಕನ್ನು ಬಿಚ್ಚಿಡುವ ಕಥೆ **'ಕತ್ತಲೆ ನೋವು ಮತ್ತು ಹೆಣ'**. ಸಂಜೀವಮ್ಮನ ಓಣಿಯ ಸೂಳೆಯರಿಂದ ಲಕಡೀ ಜಮ್ದಾರನೆಂದೇ ಕರೆಸಿಕೊಳ್ಳುವ ಹುಸೇನಸಾಬ, ಅವನ ಮೊದಲ ಹೆಂಡತಿ ಶಂಶಾದ್ ಆಪರೇಷನ್‌ನಲ್ಲಿ ನಂಜಾಗಿ ಸಾಯುತ್ತಾಳೆ. ಎರಡನೇ ಮದುವೆಯಾಗುವ ಹುಸೇನಸಾಬ ತನ್ನ ಅತೀ ಕಡಿಮೆ ಸಂಬಳದಲ್ಲಿ ಸಂಸಾರ ಸಾಗಿಸದೇ ಒದ್ದಾಡುತ್ತಾನೆ. ಎರಡನೇ ಹೆಂಡತಿ ಫಾತೀಮಾಳ ಮಕ್ಕಳೂ ಸೇರಿದಂತೆ ಒಂಬತ್ತು ಮಕ್ಕಳ ತಂದೆ ಹುಸೇನಸಾಬ. ಹದ್ದಿನ ಗುಂಡು ರೈಲ್ವೇ ಸ್ಟೇಷನ್ ಹತ್ತಿರ ಬಿದ್ದಿರುವ ಹೆಣವನ್ನು ಕಾಯುತ್ತಾ ತನ್ನ ಮೊದಲ ಹೆಂಡತಿಯೊಂದಿಗೆ ಪ್ರೀತಿಯ ದಿನಗಳು, ಅವಳ ಸಾವು, ಬಾಲ್ಯದಲ್ಲಿ ಸತ್ತ ಅವನ ತಾಯಿಯ ನಿಗೂಢ ಸಾವು, ಇವುಗಳನ್ನೆಲ್ಲಾ ನೆನಪಿಸಿಕೊಳ್ಳುತ್ತಾನೆ. ಒಮ್ಮೆ ಸ್ಮೋಕಿಂಗ್ ಕೇಸ್ ಹಿಡಿಯಲು ಸಿನೆಮಾ ಥಿಯೇಟರ್‌ಗೆ ಹೋಗುವ ಹುಸೇನಸಾಬ ಥಿಯೇಟರ್‌ನ ಕತ್ತಲೆಯಲ್ಲಿ ತನ್ನ ಎರಡನೇ ಹೆಂಡತಿ ಫಾತೀಮಾಳ ಹಿರಿಮಗಳು ಹದಿನೆಂಟು ವರ್ಷದ ನೂರ್‌ಜಹಾನ್ ಹುಡುಗನೊಬ್ಬನೊಂದಿಗೆ ಸರಸ ಸಲ್ಲಾಪದಲ್ಲಿ ತೊಡಗಿರುವುದನ್ನು ನೋಡಿ ಆಘಾತಗೊಳ್ಳುತ್ತಾನೆ. ಅದಕ್ಕೆ ತನ್ನ ಹೆಂಡತಿಯ ಕುಮ್ಮಕ್ಕು ಇದೆ ಎಂದು ಗೊತ್ತಾಗುತ್ತದೆ. ಈ ಮಧ್ಯೆ ನಿವೃತ್ತಿಯಾಗುವ ಹುಸೇನಿಗೆ ತನ್ನ ಮಗಳು ನೂರಿಯನ್ನು ಮದುವೆ ಮಾಡಬೇಕು ಎಂಬ ಕನಸು ಕಾಣುತ್ತಾನೆ. ಕಥೆಯ ಅಂತ್ಯದಲ್ಲಿ ಹೆಂಗಸಿನ ಶವದ ಮಾಂಗಲ್ಯವನ್ನು ಕದಿಯುವ ಲಕಡೀ ಜಮ್ದಾರ ಅದನ್ನು ಬಿಗಿಯಾಗಿ ಹಿಡಿದುಕೊಂಡೇ ಅಂಗಳದಲ್ಲಿಯ ಮಂಚದ ಮೇಲೆ ಮಲಗುತ್ತಾನೆ. ಆದರೆ ಕದ್ದ ವಸ್ತುವನ್ನು ದಕ್ಕಿಸಿಕೊಳ್ಳಲಾರದೇ ಸಾಯುತ್ತಾನೆ.

ಹೆಣ್ಣೊಬ್ಬಳಲ್ಲಿ ಸುಪ್ತವಾಗಿರುವ ಮಾನಸಿಕ ತುಮುಲಗಳನ್ನು ಅನಾವರಣಗೊಳಿಸುವ ಕಥೆ **'ವಿತಥ'**. ಕಥಾನಾಯಕಿ ಅನುಸೂಯ ನಡುಪರ್ತಿ ರಾಮಾಚಾರ್ಯರ ಮಗ ಅಚ್ಯುತಾಚಾರ್ಯನ ಎರಡನೇ ಹೆಂಡತಿ. ಮೊದಲ ಹೆಂಡತಿಯ ಸಾವಿನಿಂದ ಎರಡನೇ ಮದುವೆಯಾಗುವ ಅಚ್ಚಿ ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡವನು. ಅವನು ಒಳಮನೆಯಲ್ಲಿ ಉಳಿದರೆ, ತಂದೆ ವರಾಂಡದಲ್ಲಿ ಉಳಿಯುತ್ತಾನೆ. ಇಬ್ಬರೂ ಮಾತಿಲ್ಲದೇ ಬೆಳೆದರು. ಅಚ್ಚಿ ಕೆಟ್ಟವನಲ್ಲದಿದ್ದರೂ ಅನುಸೂಯ ಪ್ರತಿತಿಂಗಳೂ ತಪ್ಪದೇ ಮುಟ್ಟಾಗುತ್ತಾಳೆ.

ಅಚ್ಚಿ ಪ್ರತಿದಿನ ಆಫೀಸಿಗೆ ಹೋಗುವಾಗ ಹಾಸಿಗೆ ಹಿಡಿದಿರುವ ತನ್ನ ವೃದ್ಧ ತಂದೆಯ ಮೈ ತೊಳಸಿ, ಹಾಸಿಗೆ ಹಾಸಿ ಧೋತ್ರ ಹೊದಿಸುತ್ತಾನೆ. ಬಂದ ನಂತರ ಮತ್ತೇ ಅದನ್ನೇ ಮಾಡುತ್ತಾನೆ. ಒಮ್ಮೆ ಮಧ್ಯಾಹ್ನದ ಹೊತ್ತಿನಲ್ಲಿ ಮನೆಯ ಹಿತ್ತಲಿಗೆ ಬರುವ ಅನುಸೂಯ ಪಕ್ಕದ ಕಂಪೋಡಿನ ಕೊನೆಯ ಮನೆಯ ಗಂಡಸನೊಬ್ಬನ ಕಣ್ಣಿಗೆ ಬೀಳುತ್ತಾಳೆ. ಅವನು ಅವಳನ್ನು ಮೋಹಿಸಿ ಅವಳೊಂದಿಗೆ ಕೂಡುತ್ತಾನೆ. ಪರಿಣಾಮ ಅವಳು ಗರ್ಭಧರಿಸುತ್ತಾಳೆ. ಅದು ತನ್ನದೇ ಸೃಷ್ಟಿ ಎಂದು ತಿಳಿಯುವ ಅಚ್ಚಿಗೆ 'ಇದು ನಿನ್ನ ಕೂಸು ಅಲ್ಲ. ಪಕ್ಕದ ಮನೆಯ ಗಂಡಸು ದ್ವಯಪಾವನದು' ಎಂದು ಸತ್ಯ ಸ್ಫೋಟಿಸುತ್ತಾಳೆ. ಆದರೆ ಅಲ್ಲಿ ಯಾವುದೇ ಆ ಹೆಸರಿನ ವ್ಯಕ್ತಿಗಳೇ ಇರುವುದಿಲ್ಲ. ಅಲ್ಲದೇ ಒಂದು ವರ್ಷದಿಂದ ಆ ಮನೆಯಲ್ಲಿ ಯಾರೂ ವಾಸಿಸದೇ ಖಾಲಿಯಾಗಿಯೇ ಇರುತ್ತದೆ. ಕಥೆಯ ಅಂತ್ಯದಲ್ಲಿ ಅನುಸೂಯ ಮುಟ್ಟಾಗುವ ಮೂಲಕ ಇಡೀ ಘಟನೆಗಳೆಲ್ಲಾ ಅವಳ ಭ್ರಮಿತ ಮನಸ್ಸಿನ ಭ್ರಮೆಗಳು ಎಂಬ ಸತ್ಯ ಅನಾವರಣಗೊಳ್ಳುತ್ತದೆ.

ಕಲಾವಿದನೊಬ್ಬನ ದುರಂತ ಕಥೆಯನ್ನು ವಿವರಿಸುವುದು **'ಕುಹು ಕುಹರ'** ಕಥೆ. ಬೀದಿ ಬದಿಯಲ್ಲಿ ಕಲಾಕೃತಿಯನ್ನು ಮಾರುವ ಕಲಾವಿದ ತನ್ನ ಕಲಾಕೃತಿಯೊಂದನ್ನು ಖರೀದಿಸುವ ನಲವತ್ತು ವಯಸ್ಸಿನ ಬಿಳಿ ತೊಗಲಿನ ಶ್ರೀಮಂತ ಮಹಿಳೆ ಅದನ್ನು ತನ್ನ ಮನೆಗೆ ತೆಗೆದುಕೊಂಡು ಬಾ ಎಂದು ಕಲಾವಿದನಿಗೆ ಸೂಚಿಸಿ ಅವನನ್ನು ತನ್ನ ಮನೆಗೆ ಕರೆದುಕೊಂಡು ಬರುತ್ತಾಳೆ. ಅಲ್ಲಿ ತನ್ನದೇ ಚಿತ್ರ ಬಿಡಿಸೆನ್ನುವ ಅವಳ ಕೋರಿಕೆಗೆ ಚಿತ್ರ ಬಿಡಿಸುವ ಕಲಾವಿದ ಅವಳೊಂದಿಗೆ ಕೂಡುತ್ತಾನೆ. ನಂತರ ಚಿತ್ರ ಬರೆಯುವುದು ಮುಗಿಸಿದಾಗ ಅದು ಒಂಟಿ ಕಣ್ಣಿನ ಮೊನಾಲಿಸಾ ಮುಖವನ್ನು ಹೊಂದಿದ ಎಂಟು ಕೈಗಳಲ್ಲಿ ಪುಟ್ಟ ಮಗುವೊಂದನ್ನು ಹಿಡಿದು ಒಂದೊಂದೇ ನೆತ್ತರ ಹನಿ ನೆಕ್ಕುತ್ತಿದ್ದ ಭೀಕರ ಆಕ್ಟೋಪಸ್‌ನ ಚಿತ್ರ ಬಿಡಿಸಿರುತ್ತಾನೆ. ನಂತರ ಅವನೊಳಗಿನ ಕಲಾವಿದ ಕಳೆದು ಹೋಗುತ್ತಾನೆ. ಪೀಟರ್ ಸಾಲಮನ್, ಸುಬ್ಬಯ್ಯರೊಂದಿಗೆ ಪರಿಚಯವಾಗಿ ಅವರೊಂದಿಗೆ ಹೆಣ ಕದಿಯುವ, ಗೋರಿಯ ಮೇಲಿನ ಅಮೃತಶಿಲೆಯ ಹಲಗೆಗಳು, ಹೆಣದ ಮೈಮೇಲಿನ ಒಡವೆಗಳು ಇವುಗಳನ್ನೆಲ್ಲಾ ಕದಿಯುವ ಕೆಲಸ ಮಾಡುತ್ತಾನೆ. ಒಮ್ಮೆ ಹೆಣ ಅಗೆಯುವಾಗ ಈ ಹಿಂದೆ ತಾನು ದೈಹಿಕ ಮಿಲನ ಹೊಂದಿದ್ದ ಶ್ರೀಮಂತ ಮಹಿಳೆಯೇ ನಗ್ನ ಶವವಾಗಿ ಮಲಗಿರುತ್ತಾಳೆ. ಅದನ್ನು ನೋಡಿ ಮಾನಸಿಕ ಆಘಾತಕ್ಕೀಡಾಗುವ ನಾಯಕನ ಜೀವನ ದುರ್ಭರವಾಗುತ್ತದೆ.

ಕಥೆಗಾರ ಕೆ. ಸತ್ಯನಾರಾಯಣರು ಗುರುತಿಸಿರುವಂತೆ ರವಿಯವರ ಕಥೆಗಳಲ್ಲಿ ಬದುಕಿನಲ್ಲಿರುವ ವಿಕೃತಿ ಅಂಶಗಳ ಬಗ್ಗೆ, ಬದುಕಿನ ಬಗ್ಗೆ ಯಾವುದೇ ರುಚಿ ಮಮಕಾರ, ಇಲ್ಲದ ಮನಸ್ಥಿತಿಯ ಬಗ್ಗೆ, ಭೀಕರ ಬಡತನದ ಬಗ್ಗೆ ಪರಿಣಾಮಕಾರಿ, ಆಸಕ್ತಿಯಿಂದ ಬರೆದಿದ್ದಾರೆ. ಇದಕ್ಕೆ ಉದಾಹರಣೆಯಾಗಿ ಕುಹು ಕುಹರ, ವಿತಥ, ಪರಿಚಯ, ಆಕ್ರಮಣ, ವೇಷಗಳು, ವಂಧ್ಯಾ ಕಥೆಗಳನ್ನು ನೋಡಬಹುದು. 'ಕುಹು ಕುಹರ' ಕಥೆಯ ಕಲಾವಿದ ತನ್ನ ಮನಸ್ಸಿನೊಳಗೆ ಅಂದುಕೊಳ್ಳುವ ಮಾತುಗಳು...

'ನೀವು ನೋಡಿದ್ದೆಲ್ಲಾ, ನಿಮಗೆ ಚೆಂದವೆನಿಸಿದ್ದೆಲ್ಲಾ ನಾನು ಬರೆಯಲಾರೆ. ಚೆಂದವೆಂದರೆ ನನಗೆ ಅಸಹ್ಯ. ಕೊಳಚೆಗೇರಿಗಳ ಧೂಳಂಟಿಕೊಂಡ ಮಗುವಿನ ಪಾಚಿ ಹಲ್ಲುಗಳ ನಿಷ್ಕಳಂಕ ನಗೆಯಲ್ಲಿನ ಚೆಂದ ನಿಮ್ಮ ಬಿನಾಕಾ ಹಲ್ಲುಗಳಲ್ಲಿ ಖಂಡಿತಾ ಇಲ್ಲ. ನೆಲಕಚ್ಚಿ ಮಲಗಿದ ಗುಡಿಸಲ ಕತ್ತಲು ಮೂಲೆಯಲ್ಲಿ ಕುಳಿತು ತನ್ನ ಕಪ್ಪು ಮಗುವಿಗೆ ಹಾಲುಣಿಸುವ ಕುಷ್ಠರೋಗಿ ತಾಯಿಯ ಚಿತ್ರ ಬರೆಯಲು ನನ್ನ ಕುಂಚ ಕಾತರಗೊಂಡೀತೇ ಹೊರತು ಬೇಲೂರು ಶಿಲಾ ಬಾಲಿಕೆಯ ಅರೆನಗ್ನ ತೊಡೆಗಳಿಗೆ ರಂಗು ಬಳಿಯಲು ಅಲ್ಲ'.[೬]

ಎಂಬ ಮಾತುಗಳು ರವಿಯವರ ಅಂತಹ ಕಥೆಗಳ ಸೃಷ್ಟಿಯ ಧೋರಣೆಗಳಾಗಿರಬಹುದು ಅನಿಸುತ್ತದೆ. ಇದಕ್ಕೆ ಪೂರಕವಾಗಿ 'ಹಾಯ್ ಬೆಂಗಳೂರ್!' ಪತ್ರಿಕೆಯ 'ಬಾಟಮ್ ಐಟಮ್' ಅಂಕಣ ಬರಹದಲ್ಲಿಯ ಅವರ ಮಾತುಗಳನ್ನು ಇಲ್ಲಿ ನೋಡಬಹುದು.

'ನಮ್ಮ ಅನೇಕ ಸಾಹಿತ್ಯ ಕೃತಿಗಳು ಬಡವರ ಮತ್ತು ಬಡತನದ ಸುತ್ತ ನೇಯ್ದಂಥವು 'ನಾನು ಬಡವಿ ಆತ ಬಡವ' ಅಂತ ಬೇಂದ್ರೆ ಪಲ್ಲವಿಸಿದಾಗ ಕಿವಿಗೆ ಇಂಪು, ಮನಸ್ಸಿಗೆ ಹಿತ ಅನಿಸುತ್ತದೆ. ಯುಗ ಯುಗಳಿಂದಲೂ ಬಡತನ, ಕಾರ್ಪಣ್ಯ, ಕಣ್ಣೀರು ನಮ್ಮ ಮಹಾಕಾವ್ಯಗಳಿಗೆ, ಕೃತಿಗಳಿಗೆ ಸಬ್ಜೆಕ್ಟ್‌ಗಳಾಗಿವೆ. ವನವಾಸಕ್ಕೆ ಹೋದ ಶ್ರೀರಾಮ, ಅಶೋಕ ವನದ ಪಾಲಾದ ಸೀತೆ, ಕಾಡು ಸೇರಿದ ಪಾಂಡವರು, ಸ್ಮಶಾನ ಕಾಯ್ದ ಹರಿಶ್ಚಂದ್ರ ಎಲ್ಲರೂ ಬಡತನದ ಸುಳಿಗೆ ಸಿಕ್ಕವರೇ. ಕಣ್ಣೀರು, ನಿಟ್ಟುಸಿರು ಮುಂತಾದವು ಹುಟ್ಟಿಸುವ ರಮ್ಯ ಕಥೆಗಳನ್ನು ಶ್ರೀಮಂತಿಕೆ ಹುಟ್ಟಿಸುವುದಿಲ್ಲ. ಡುಮ್ಮ ಡುಮ್ಮಗೆ, ಮೈ ಕೈ ತುಂಬಿಕೊಂಡಿರುವ ಮುದ್ದಾದ ಮಗುವಿನ ಸುಂದರ ಚಿತ್ರದ ಪಕ್ಕದಲ್ಲಿ ಸೋಮಾಲಿಯಾದ ಮೂಳೆ ಚಕ್ಕಳದ ಮಗುವಿನ ಚಿತ್ರವಿಡಿ, ನಿಮ್ಮ ಕಣ್ಣು ಹೋಗುವುದು ಸೋಮಾಲಿಯಾದ ಮಗುವಿನತ್ತ. ಬಡತನ ಬಿಂಬಿಸುವ ಪೇಂಟಿಂಗ್‌ಗಳು ವಿಪರೀತ ಬೆಲೆಗೆ ಮಾರಾಟವಾಗುತ್ತವೆ ಎಂಬುದೂ ಸತ್ಯ.

ಮನುಷ್ಯನನ್ನು ವಿಷಾದವೆಂಬುದು ಬಹಳ ಬೇಗ ತಲುಪುತ್ತದೆ. ಕಲಕುತ್ತದೆ. ಎಲ್ಲೋ ಒಂದು ಕಡೆ ಅದನ್ನು ಓದುತ್ತಿದ್ದರೆ, ನೋಡುತ್ತಿದ್ದರೆ ನಮಗೆ 'ನಾವೇ' ನೆನಪಾಗುತ್ತೇವೆ. ನಮ್ಮ ಕಾರ್ಪಣ್ಯವನ್ನು ಕಥಾನಾಯಕನೊಂದಿಗೆ ಕಥಾವಸ್ತುವಿನೊಂದಿಗೆ ಹೋಲಿಸಿಕೊಳ್ಳುತ್ತೇವೆ. ಮನಸು ಆರ್ದ್ರಗೊಳ್ಳುತ್ತದೆ. ಶ್ರೀಮಂತಿಕೆ, ಅದರ ಪ್ರದರ್ಶನ ಮನಸ್ಸಿಗೆ ಹಿತವೆನಿಸುವುದಿಲ್ಲ. ಮದುವೆ ಮನೆಯ ವಿಜೃಂಭಣೆ ಬೇಗ ಮರೆತು ಹೋಗುತ್ತದೆ. ಅತಿಥಿಗಳು ಚೆಲ್ಲಿ ಹೋದ ಅನ್ನವನ್ನು ಬಡವರು ಕಿತ್ತಾಡುತ್ತಾ ಹಂಚಿಕೊಂಡದ್ದು ಬಹಳ ಕಾಲ ಕಹಿಯಾಗಿ ಮನಸ್ಸಿನಲ್ಲಿ ಉಳಿಯುತ್ತದೆ'.[೭]

'ಕುಹು ಕುಹರ' ಕಥೆಯ ಕಲಾವಿದನ ಮನಸ್ಸಿನ ಮಾತುಗಳು ಹಾಗೂ ರವಿಯವರ ಅಂಕಣ ಬರಹದ ಈ ಮಾತುಗಳು ಇವೆರಡು ಒಂದೇ ಧೋರಣೆಯನ್ನು ಧ್ವನಿಸುತ್ತವೆ. ರವಿಯವರ ಇಂತಹ ನಿಲುವುಗಳು, ಅನಿಸಿಕೆಗಳೇ 'ಕುಹು ಕುಹರ', 'ವಿತಥ', 'ಪರಿಚಯ', 'ಆಕ್ರಮಣ', 'ವೇಷಗಳು', 'ವಂಧ್ಯಾ' ಕಥೆಗಳ ಸೃಷ್ಟಿಗೆ ಕಾರಣವಾಗಿರಬಹುದು.

ನಿರೀಂದ್ರಿಯ ಸ್ಥಿತಿಯ ಕಥೆಗಾರನೊಬ್ಬನ ವಿಚಿತ್ರ ಬದುಕನ್ನು ಹಾಗೂ ಅವನ ಜನ್ಮರಹಸ್ಯವನ್ನು ತೆರೆದಿಡುವ ಕಥೆ **'ಪರಿಚಯ'**. ಕಥಾನಾಯಕ ಕಥೆಗಾರ ಶ್ರೀವತ್ಸ ತನ್ನ ವಿಕಾರ ರೂಪದಿಂದಾಗಿ ತನ್ನ ಕತ್ತಲು ಕೋಣೆಯನ್ನು ಬಿಟ್ಟು ಹೊರಗೆ ಬಂದವನಲ್ಲ. ಪತ್ರಿಕೆಗೆ ಕಥೆ ಬರೆದು ಕಳಿಸಿ, ಸಂಪಾದಕರು ಕಳಿಸುವ ಸಂಭಾವನೆ ಪಡೆಯುತ್ತಾನೆ. ಅವನಿಗೆ ವಿಕಾರಿ ರೂಪದ ಇಬ್ಬರು ತಂಗಿಯರು. ಆದ್ದರಿಂದಲೇ ಅವರ ಮದುವೆಯ ಜಾತಕಗಳು ವಾಪಾಸು ಬಂದು ಬೀಳುತ್ತವೆ. ಪತ್ರಿಕೆಯೊಂದರ ಸಂಪಾದಕರು ತಮ್ಮ ಪತ್ರಿಕೆಯ ಹತ್ತನೇ ವಾರ್ಷಿಕೋತ್ಸವದ ಪ್ರಯುಕ್ತ ಕಥೆಗಾರ ಶ್ರೀವತ್ಸನಿಂದ ಕಥೆ ಹಾಗೂ ಅವನ ಭಾವಚಿತ್ರ, ಕಿರುಪರಿಚಯವನ್ನು ಕಳುಹಿಸಿಕೊಡುವಂತೆ ವಿನಂತಿಸಿರುತ್ತಾರೆ. ತನ್ನ ಪರಿಚಯವನ್ನು ಏನೆಂದು ಬರೆಯಲಿ ಎಂದು ಹೈರಾಣಾಗುವ ಕಥಾನಾಯಕ ಮನೆಯನ್ನೆಲ್ಲಾ ಹುಡುಕುತ್ತಾನೆ. ತಂಗಿಯರ ಕೋಣೆ, ಅವರ ವ್ಯಾನಿಟಿ ಬ್ಯಾಗುಗಳನ್ನೆಲ್ಲಾ ಶೋಧಿಸುತ್ತಾನೆ. ಅಲ್ಲಿ ಅಂಥದ್ದೇನೂ ಸಿಗುವುದಿಲ್ಲ. ಆದರೆ ಅವನ ತಂದೆ ದೇವರ ಸಂಪುಟದ ಮುಂದೆ ಇರುವ ಪುಟ್ಟದಾದ ಕೆಂಪು ಪೆಟ್ಟಿಗೆ ಇಟ್ಟಿರುತ್ತಾನೆ. ಆ ಪೆಟ್ಟಿಗೆಯನ್ನು ಎತ್ತಿಕೊಂಡು ತನ್ನ ಕೋಣೆಗೆ ಬರುವ ಶ್ರೀವತ್ಸ ಕೆಟ್ಟ ಕುತೂಹಲದಿಂದ ಅದನ್ನು ಬಿಚ್ಚುತ್ತಾನೆ. ಅದರೊಳಗಿದ್ದ ಸುಮಾರು ಮೂವತ್ತು ವರ್ಷಗಳ ಹಿಂದಿನ ಪತ್ರವೊಂದು ಅವನ ಜನ್ಮರಹಸ್ಯವನ್ನು ತೆರೆದಿಡುತ್ತದೆ. ಇದುವರೆಗೂ ತಾನು ತಿಳಿದುಕೊಂಡಂತೆ ನಂಜನಗೂಡು ಗೋವಿಂದರಾಯ ತನ್ನ ತಂದೆಯಲ್ಲ. ತಾವು ಆದವಾನಿ ಶೇಷಪ್ಪನ ಮಕ್ಕಳು. ಶೇಷಪ್ಪನ ಹೆಂಡತಿಯಾದ ತನ್ನ ತಾಯಿಯೊಂದಿಗೆ ಗೋವಿಂದರಾಯ ಪರಾರಿಯಾಗಿ ಬಂದು ಸಂಸಾರ ನಡೆಸಿದ್ದ ಎಂಬ ಸತ್ಯ ಗೊತ್ತಾಗುತ್ತದೆ. ತನ್ನ ತಂಗಿಯರ ಮೇಲೆ ಪ್ರೀತಿ ಬೆಳೆಯುತ್ತದೆ. ಅವರಿಬ್ಬರ ಜಾತಕಗಳನ್ನು ಜೇಬಲ್ಲಿಟ್ಟುಕೊಂಡು ಹೊರಗೆ ಬರುತ್ತಾನೆ. ಈ ಜನ್ಮರಹಸ್ಯ ಗೊತ್ತಾಗಿದ್ದರಿಂದಲೋ ಏನೋ ಗೋವಿಂದರಾಯ ಮರುದಿನ ಬೆಳಿಗ್ಗೆ ಸತ್ತು ಹೋಗಿರುತ್ತಾನೆ. ಕಥೆಯ ಕೊನೆಯಲ್ಲಿ ಶ್ರೀವತ್ಸ ತನ್ನ ನಿರೀಂದ್ರಿಯ ಸ್ಥಿತಿಯಿಂದ ಬಿಡುಗಡೆಗೊಳ್ಳುತ್ತಾನೆ.

'ಪರಿಚಯ' ಕಥೆಯ ನಾಯಕನ ಮನಸ್ಥಿತಿಯನ್ನೇ ನೆನಪಿಸುವ ಕಥೆ **'ಆಕ್ರಮಣ'**. ಕಥಾನಾಯಕ ನಿರೀಂದ್ರಿಯ ಸ್ಥಿತಿಯಲ್ಲಿರುವ ವಿಪರೀತ ಅಂತರ್ಮುಖಿ ಸ್ವಭಾವದವನು. ತನ್ನ ಗೆಳೆಯ ಸುಧೀಂದ್ರನ ಒತ್ತಾಯದಿಂದ ಮದುವೆಯಾಗುತ್ತಾನೆ. ಆದರೆ ಹೆಂಡತಿಯೊಂದಿಗೆ ಯಾವುದೇ ರೀತಿಯ ಭಾವನಾತ್ಮಕ ಸಂಬಂಧ ಹೊಂದದೇ ತನ್ನ ಪಾಡಿಗೆ ತಾನಿರುತ್ತಾನೆ. ಆದರೆ ನಿಧಾನವಾಗಿ ಅವನ ಹೆಂಡತಿ ಅವನ ಸ್ವಭಾವ, ವ್ಯಕ್ತಿತ್ವದ ಮೇಲೆ ತನ್ನ ಮಾತು, ಭಾವನೆಗಳಿಂದ ಆಕ್ರಮಣ ಮಾಡಲಾರಂಭಿಸುತ್ತಾಳೆ. ಈ ನಡುವೆ ಗರ್ಭಿಣಿಯಾಗುವ ಅವನ ಹೆಂಡತಿ ಗಂಡುಮಗುವಿಗೆ ಜನ್ಮ ನೀಡುತ್ತಾಳೆ. ಮಗುವಿನ ಆಟ, ಅಳು, ನಗೆ, ಕೇಕೆಗಳಲ್ಲಿ ಅವನು ತನ್ನ ಏಕಾಂತವನ್ನು ಕಳೆದುಕೊಳ್ಳುತ್ತಾನೆ. ಒಮ್ಮೆ ಮಗುವಿನ ಆರೋಗ್ಯ ಸ್ಥಿತಿ ಏರು ಪೇರಾಗಿ ಮಗು ಸಾಯುತ್ತದೆ. ಮಗುವಿನ ಸಾವೂ ಕಥಾನಾಯಕನ ಮೇಲೆ ಯಾವುದೇ ಪರಿಣಾಮಗಳನ್ನು ಬೀರುವುದಿಲ್ಲ. ನಿರ್ಲಿಪ್ತವಾಗಿಯೇ ಇರುತ್ತಾನೆ. ಪದೇ ಪದೇ ಮಗುವನ್ನು

ನೆನಪಿಸಿಕೊಂಡು ಅಳುವ ತನ್ನ ಹೆಂಡತಿಯಿಂದ ದೂರ ಇರಲು ತಡವಾಗಿ ಬರುವ ಕಥಾನಾಯಕನಿಗೆ ಒಳಕೋಣೆಯಲ್ಲಿ ಗೆಳೆಯ ಸುಧೀಂದ್ರ ತನ್ನ ಹೆಂಡತಿಗೆ ಸಮಾಧಾನ ಮಾಡುತ್ತಿರುತ್ತಾನೆ. 'ಇನ್ನೊಂದು ಮಗು ಹುಟ್ಟುತ್ತದೆ. ಧೈರ್ಯ ತಂದ್ಕೋ' ಎನ್ನುತ್ತಿರುತ್ತಾನೆ. ಒಳಕೋಣೆಗೆ ಬಗ್ಗಿ ನೋಡುವ ಕಥಾನಾಯಕನಿಗೆ ತನ್ನ ಹೆಂಡತಿಯನ್ನು ನಗ್ನಗೊಳಿಸುತ್ತಿರುವ ಗೆಳೆಯ ಸುಧೀಂದ್ರ ಕಾಣಿಸುತ್ತಾನೆ. ಅದಕ್ಕೂ ಯಾವುದೇ ಪ್ರತಿಕ್ರಿಯೆಯನ್ನು ತೋರದ ಕಥಾನಾಯಕ ತಾನು ಈ ಹಿಂದೆ ಮಾಡಿಸಿಕೊಂಡ ವೀರ್ಯ ಪರೀಕ್ಷೆಯ ಫಲಿತಾಂಶವನ್ನು ನೋಡುತ್ತಾನೆ. 'ಜೀವಾಣುವಿಲ್ಲದ ವೀರ್ಯ, ಮಕ್ಕಳನ್ನು ಹುಟ್ಟಿಸಲಾರದು' ಎಂಬ ಸಾಲುಗಳು ಅವನನ್ನೇ ನೋಡುತ್ತಿರುವಂತೆ ಭಾಸವಾಗುತ್ತದವನಿಗೆ. ಸತ್ತ ಮಗುವಿನ ಮುಖದಲ್ಲಿ ಸುಧೀಂದ್ರನ ಹೋಲಿಕೆಗಳು ಕಾಣಿಸಿಕೊಳ್ಳತೊಡಗುತ್ತವೆ. ಯಾವುದಕ್ಕೂ ಪ್ರತಿಕ್ರಿಯೆ ತೋರದ ಕಥಾನಾಯಕ ತನ್ನ ಭಯಾನಕ ಮೌನದೊಳಗೆ ಮರೆಯಾಗುತ್ತಾನೆ.

ಊರೂರು ಬೀದಿಗಳಲ್ಲಿ ಹಳ್ಳಿಗಳ ಚಾವಡಿಗಳಲ್ಲಿ ಕುಣಿಯುವುದನ್ನೇ ಬದುಕನ್ನಾಗಿಸಿಕೊಂಡ ವೇಷಗಾರರ ಗುಂಪಿನ ಹೆಂಗಸೊಬ್ಬಳ ಕರುಣಾಜನಕ ಕಥೆಯನ್ನು **'ವೇಷಗಳು'** ಕಥೆ ಹೇಳುತ್ತದೆ. ಹನ್ನೊಂದನೇ ವಯಸ್ಸಿಗೇ ಕಾಲಿಗೆ ಗೆಜ್ಜೆಕಟ್ಟಿಕೊಂಡು ನರ್ತಿಸುವ ಕಥಾನಾಯಕಿ ಶಿವಿ ತಬ್ಬಲಿ. ಆಗ ತಾನೇ ಯೌವನಕ್ಕೆ ಕಾಲಿಡುತ್ತಿರುವ ಶಿವಿಯ ಮೇಲೆ ಗುಂಪಿನ ಯಜಮಾನ ಸಿಮ್ಮಣ್ಣ ಅತ್ಯಾಚಾರವೆಸಗುತ್ತಾನೆ. ಪರಿಣಾಮ ಗರ್ಭಿಣಿಯಾದ ಅವಳು ತುಂಬು ಗರ್ಭಿಣಿಯಾದಾಗ ಅವಳಿಂದ ಯಾವುದೇ ಉಪಯೋಗವಿಲ್ಲವೆಂದು ಅವಳ ತಂಡ ಅವಳನ್ನು ಬಿಟ್ಟು ಎಲ್ಲಿಗೋ ಹೊರಟುಹೋಗುತ್ತದೆ. ರೈಲ್ವೇ ಸ್ಟೇಷನ್‌ನಲ್ಲಿ ಅನಾಥವಾಗಿ ಮಲಗಿದ ಅವಳನ್ನು ತನ್ನ ಮನೆಗೆ ಕರೆತರುವ ಬಸಪ್ಪ ಅವಳೊಂದಿಗೆ ತನ್ನ ಹೊಸಬದುಕನ್ನು ಹಂಚಿಕೊಳ್ಳುವ ಕನಸು ಕಾಣುತ್ತಾನೆ. ಅವಳನ್ನು ಪ್ರೀತಿಯಿಂದ ಶುಶ್ರೂಷೆ ಮಾಡುತ್ತಾನೆ. ಶಿವಿಗೆ ಹೆರಿಗೆಯಾದಾಗ ಬುದ್ಧಿಮಾಂದ್ಯ, ಕೋತಿಯನ್ನು ಹೋಲುವ ವಿಕಾರಿ ಕೂಸಿಗೆ ಜನ್ಮ ನೀಡಿರುತ್ತಾಳೆ. ಆದರೂ ಶಿವಿ ಅದನ್ನು ತುಂಬು ಪ್ರೀತಿಯಿಂದ ಲಾಲನೆ–ಪಾಲನೆ ಮಾಡುತ್ತಾಳೆ. ಅದು ಆಂಜನೇಯನ ಮುಖವನ್ನು ಹೋಲುತ್ತಿದ್ದರಿಂದ ಮಗುವಿಗೆ ಅಂಜಪ್ಪನೆಂದು ಹೆಸರಿಡುತ್ತಾಳೆ. ಶಿವಿ ಬಸಪ್ಪರ ನಡುವಿನ ಅಂತರ ಹೆಚ್ಚಾಗಿಸುತ್ತದೆ ಮಗು. ಈ ನಡುವೆ ಅವಳೊಂದಿಗಿನ ದೈಹಿಕ ಸಂಪರ್ಕಕ್ಕಾಗಿ ಹಾತೊರೆಯುವ ಬಸಪ್ಪ ಬಲವಂತದಿಂದ ಅವಳನ್ನು ಕೂಡುತ್ತಾನೆ. ಪರಿಣಾಮವಾಗಿ 'ಡಿಸ್‌ಪೆರೂನಿಯಾ' ಎಂಬ ಖಾಯಿಲೆಗೆ ತುತ್ತಾದ ಶಿವಿ ಬಸಪ್ಪನಿಗೆ ಸುಖವನ್ನು ನೀಡದ ಸ್ಥಿತಿ ಹೊಂದುತ್ತಾಳೆ. ಶಿವಿ ಮತ್ತು ಬಸಪ್ಪರಿಗೆ ಮಗುವೇ ಬಂಡವಾಳವಾಗುತ್ತದೆ. ಬೀದಿ ಬದಿಯಲ್ಲಿ ಮಗುವನ್ನಿಟ್ಟುಕೊಂಡು ಜನರು ಎಸೆದ ಚಿಲ್ಲರೆ ಹಣದಿಂದ ಜೀವನ ನಡೆಸುತ್ತಾರೆ. ತನಗಿನ್ನು ಶಿವಿಯಿಂದ ಯಾವ ಸುಖ ಸಿಗಲಾರದು ಎಂದು ತಿಳಿಯುವ ಬಸಪ್ಪ ಅವಳನ್ನು ಬಿಟ್ಟು ಮಗು ಅಂಜಪ್ಪನನ್ನು ಅವಳಿಗೆ ತಿಳಿಯದಂತೆ ಕದ್ದೊಯ್ದು ಅದನ್ನು ಸಿಮ್ಮಣ್ಣನ ತಂಡಕ್ಕೆ ಮಾರಿ ತಾನು ಜೋಗಪ್ಪನ ವೇಷ ಹಾಕಿಕೊಂಡು ಊರೂರು ಅಲೆಯತೊಡಗುತ್ತಾನೆ. ಇತ್ತ ಸಿಮ್ಮಣ್ಣ ಇದು ತನ್ನದೇ ಸೃಷ್ಟಿ ಎಂಬ ಅರಿವಿಲ್ಲದೇ

ಆ ಮಗುವಿಗೆ ಬಣ್ಣ ಬಳಿದು ತನ್ನ ತಂಡದಲ್ಲಿ ನರ್ತಿಸಲು ಬಳಸಿಕೊಳ್ಳುತ್ತಾನೆ. ಅತ್ತ ಶಿವಿ ತನ್ನ ಮಗುವಿಗೋಸ್ಕರ ಪ್ರಲಾಪಿಸುತ್ತಾಳೆ. ಹುಡುಕುವ ವಿಫಲಯತ್ನ ನಡೆಸುತ್ತಾಳೆ.

ಹೆಣ್ಣನ್ನು ಕಣ್ಣೆತ್ತಿಯೂ ನೋಡದ ಬ್ರಹ್ಮಚಾರಿ ಬಾಲಾಜಿಯ ಜೀವನದಲ್ಲಿ ಹೆಣ್ಣಿನ ಪ್ರವೇಶವಾಗುವ ಕಥಾವಸ್ತುವನ್ನೊಳಗೊಂಡ ಕಥೆ **'ಗಿಡ್ಡಾಂಜನೇಯ ಸ್ವಾಮಿ'**. ಕಥಾನಾಯಕ ಬಾಲಾಂಜಿ ಬಳ್ಳಾರಿಯ ಗೌಳೇರಹಟ್ಟಿಯ ಗಿಡ್ಡಾಂಜನೇಯ ಸ್ವಾಮಿ ಗುಡಿಯ ಪೂಜಾರಿ. ಎಂಥ ಅಪರೂಪದ ಸ್ಫುರದ್ರೂಪಿ ಹೆಂಗಸು ಎದುರಿಗೆ ನಿಂತರೂ ಕಣ್ಣೆತ್ತಿ ನೋಡದ ಬ್ರಹ್ಮಚಾರಿ. ಪ್ರತಿದಿನ ಆಂಜನೇಯ ಸ್ವಾಮಿಗೆ ಒಗೆದ ಧೋತರ ಉಡಿಸಿ, ಹೂವಿನಿಂದ ಅಲಂಕಾರ ಮಾಡುತ್ತಾನೆ. ಮದುವೆಯಾಗಿ ಎಂಟು ವರ್ಷವಾದರೂ ಮಕ್ಕಳಾಗದ ಸೋಡ ಮಲ್ಲೇಶಿಯ ಹೆಂಡತಿ ಸಿರಿಜಾತ ಬಾಲಾಂಜಿಯ ಬಲಿಷ್ಟ ದೇಹಕ್ಕೆ ಮೋಹಗೊಳ್ಳುತ್ತಾಳೆ. ಸದಾ ಶ್ರೀ ರಾಮ್ ಜೈ ರಾಮ್ ಎಂದು ಮಣಮಣಿಸುವ ಬಾಲಾಂಜಿ ಗುಡಿಯ ಹಿತ್ತಲಿನ ತನ್ನ ಪುಟ್ಟ ಮನೆಯಲ್ಲಿ ರಾತ್ರಿ ಮಲಗಿದ್ದಾಗ ಅಲ್ಲಿಗೆ ಬರುವ ಸಿರಿಜಾತ ಅವನೊಂದಿಗೆ ದೈಹಿಕ ಸಂಪರ್ಕ ಹೊಂದುತ್ತಾಳೆ. ಪರಿಣಾಮವಾಗಿ ಗರ್ಭಧರಿಸುವ ಸಿರಿಜಾತ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಈ ನಡುವೆ ಸಿರಿಜಾತ ಏಳು ತಿಂಗಳ ಗರ್ಭಿಣಿಯಾಗಿದ್ದಾಗ ಅವಳ ಮನೆಗೆ ಬರುವ ಅವಳ ತಂಗಿ ಪಾರಿಜಾತ ಅಲ್ಲೇ ನೆಲೆಗೊಳ್ಳುತ್ತಾಳೆ. ಅವಳೊಂದಿಗೆ ವಿಪರೀತ ಸಲುಗೆಯಿಂದ ವರ್ತಿಸುವ ಸಿರಿಜಾತಳ ಗಂಡ ಮಲ್ಲೇಶಿ, ಹಾಗೂ ಪಾರಿಜಾತಳೂ ಚೆಲ್ಲುಚೆಲ್ಲಾಗಿ ಅವನೊಂದಿಗೆ ವರ್ತಿಸುವುದನ್ನು ಬಾಲಾಂಜಿಗೆ ಹೇಳಿ ಕಣ್ಣೀರಾಗುತ್ತಾಳೆ ಸಿರಿಜಾತ. ಪಾರಿಜಾತಳ ಮೇಲೂ ಮೋಹಗೊಳ್ಳುವ ಬಾಲಾಂಜಿ, ಸಿರಿಜಾತಳ ಹೆರಿಗೆಯಾದ ರಾತ್ರಿಯಂದು ಗುಡಿಗೆ ಬರುವ ಪಾರಿಜಾತಳೊಂದಿಗೆ ದೈಹಿಕ ಸಂಬಂಧ ಬೆಳೆಸುತ್ತಾನೆ. ಪಾರಿಜಾತಳಿಗೂ ಗರ್ಭ ಕುದುರುತ್ತದೆ. ಅದು ತನ್ನದೇ ಜೀವ ಸೃಷ್ಟಿ ಎಂದು ತಿಳಿಯುವ ಮಲ್ಲೇಶಿ ತನ್ನ ನಾದಿನಿಯನ್ನೇ ಮದುವೆಯಾಗುವ ಸಿದ್ಧತೆ ನಡೆಸುತ್ತಾನೆ. ಇದರಿಂದ ಸಿರಿಜಾತಳಿಗೆ ಮತಿಭ್ರಮಣೆಯಾಗುತ್ತದೆ. ಪಾರಿಜಾತಳನ್ನು ಮಲ್ಲೇಶಿ ಮದುವೆಯಾಗುತ್ತಾನೆ. ಸಿರಿಜಾತಳ ಸ್ಥಿತಿ, ತಾನು ಕಳೆದುಕೊಂಡ ಬ್ರಹ್ಮಚರ್ಯ ಇವುಗಳ ಬಗ್ಗೆ ಚಿಂತಿಸುವ ಬಾಲಾಂಜಿ ತಪ್ಪಿತಸ್ಥ ಭಾವನೆಯಿಂದ ಮನೋವೇದನೆ ಪಡುತ್ತಾನೆ. ಪೂಜೆಯಲ್ಲಿ ಮೊದಲಿನ ಏಕಾಗ್ರತೆ, ಉತ್ಸಾಹ ಉಳಿಯುವುದಿಲ್ಲ. ಅದೇ ಚಿಂತೆಯಲ್ಲಿ ಚಳಿ ಜ್ವರಕ್ಕೀಡಾಗಿ ಬಾಲಾಂಜಿ ಕೊನೆಯುಸಿರನ್ನೆಳೆಯುತ್ತಾನೆ.

ಪ್ರೀತಿ ಪ್ರೇಮವನ್ನೇ ಕಥಾವಸ್ತುವನ್ನಾಗಿಸಿಕೊಂಡು ರಚಿತವಾದ ಕಥೆ **'ಬರುವನೇನೇ ಸಖಿ ಚೆಲುವ..'** ತಾಯಿಯಂತೆ ಪ್ರೀತಿಸುವ, ಸ್ನೇಹಿತನಂತೆ ವರ್ತಿಸುವ ತಂದೆಯೊಂದಿಗೆ ಬೆಳೆಯುವ ಕಥಾನಾಯಕಿ ತನ್ನ ಕಾಲೇಜು ವಿದ್ಯಾಭ್ಯಾಸಕ್ಕಾಗಿ ದೂರದ ಊರಿನ ಯೂನಿವರ್ಸಿಟಿಗೆ ಸೇರುತ್ತಾಳೆ. ಹಾಸ್ಟೆಲ್‌ನಲ್ಲಿದ್ದುಕೊಂಡೇ ಓದುವ ಅವಳು ಅದೇ ಯೂನಿವರ್ಸಿಟಿಯ ರಿಸರ್ಚ್ ವಿದ್ಯಾರ್ಥಿ ಮುಕುಂದನನ್ನು ಪ್ರೀತಿಸುತ್ತಾಳೆ. ಅದನ್ನು ಗುರುತಿಸುವ ಅವಳ ತಂದೆ ಅದನ್ನು ವಿರೋಧಿಸದೇ ಅವಳಿಗೆ ಪ್ರೇಮದ ಮೊದಲ ಪಾಠವನ್ನು ಹೇಳಿಕೊಡುತ್ತಾನೆ. ಬಾಲ್ಯದಲ್ಲಿ ಅವಳಿಗೆ ಈಜು ಕಲಿಸುವ ಅವಳ ತಂದೆ ನಾಲ್ಕನೇ ಕ್ಲಾಸ್‌ಗೆ

ಆಗುವಷ್ಟು ಪಾಠವನ್ನು ಮನೆಯಲ್ಲಿಯೇ ಹೇಳಿಕೊಡುತ್ತಾನೆ. ಯೂನಿವರ್ಸಿಟಿಯಲ್ಲಿ ಮುಕುಂದನನ್ನು ಪ್ರೀತಿಸುವ ಬಗ್ಗೆಯೂ ತನ್ನ ತಂದೆಗೆ ಪತ್ರ ಬರೆದು ತಿಳಿಸುತ್ತಾಳೆ. ಪರೀಕ್ಷೆಯ ಹೊತ್ತಿಗೆ ಹಾಸ್ಟೆಲ್ ಖಾಲಿಮಾಡಿ ಮುಕುಂದ್‌ನ ಜೊತೆಯಲ್ಲಿ ಅವನ ರೂಮ್‌ನಲ್ಲಿರಲಾರಂಭಿಸುತ್ತಾಳೆ. ಅನಿರೀಕ್ಷಿತ ಸಂದರ್ಭವೊಂದರಲ್ಲಿ ಅವರಿಬ್ಬರೂ ದೈಹಿಕ ಮಿಲನಹೊಂದುತ್ತಾರೆ. ಪ್ರಸ್ತುತ ಆಧುನಿಕ ಜನ ಜೀವನದಲ್ಲಿ ವಿವಾಹ ಪೂರ್ವ ಸಹಜೀವನ (ಲಿವಿಂಗ್ ಟುಗೆದರ್) ಸಂಸ್ಕೃತಿ ಬೆಳೆಯುತ್ತಿದೆ. ಅದರ ಒಂದು ಎಳೆ ಈ ಕಥೆಯಲ್ಲಿ ಹೆಣೆದಿರುವುದನ್ನು ಕಾಣಬಹುದು. ಕೊಳಲು ನುಡಿಸುವುದನ್ನು ತುಂಬಾ ಪ್ರೀತಿಸುವ ಮುಕುಂದ್ ಅದನ್ನು ಹೆಚ್ಚಿನ ಮಟ್ಟದಲ್ಲಿ ಕಲಿಯಲು ಇನ್ನೊಬ್ಬ ಗುರುವನ್ನು ಹುಡುಕಿಕೊಂಡು ಪುಣೆಗೆ ಹೊರಡುತ್ತಾನೆ. ಒಂದು ವರ್ಷದ ನಂತರ ಮರಳಿ ಬರುತ್ತೇನೆಂಬ ಆಶ್ವಾಸನೆ ನೀಡುತ್ತಾನೆ. ಇತ್ತ ಭಾರವಾದ ಮನಸ್ಸಿನಿಂದ ಊರಿಗೆ ಬರುವ ಅವಳ ಗರ್ಭದಲ್ಲಿ ಪ್ರೇಮದ ಫಲ ಚಿಗುರೊಡೆದಿರುತ್ತದೆ. ಮುಕುಂದನಿಗೆ ವಿಷಯ ತಿಳಿಸಲು ಸಂಪರ್ಕಿಸಲು ವಿಫಲ ಪ್ರಯತ್ನ ನಡೆಸುವ ಅವಳ ವರ್ತನೆಯನ್ನು ಗಮನಿಸುವ ಅವಳ ತಂದೆಗೆ ತನ್ನ ಮಗಳು ಗರ್ಭವತಿಯಾಗಿರುವ ವಿಷಯ ತಿಳಿಯುತ್ತದೆ. ಆದರೂ ಸಂಯಮ ಕಳೆದುಕೊಳ್ಳದೇ ತನ್ನ ಮಗಳ ಬೆನ್ನಿಗೆ ಆಸರೆಯಾಗಿ ನಿಲ್ಲುತ್ತಾನೆ. ಅವಳಲ್ಲಿ ಭರವಸೆ, ಉತ್ಸಾಹವನ್ನು ತುಂಬುತ್ತಾನೆ. ಊರ ಹೊರಗಿನ ತೋಟದ ಮನೆಯಲ್ಲಿ ಅವಳನ್ನಿರಿಸಿ ಅವಳ ಹೆರಿಗೆಗೆ ಸಕಲ ಸಿದ್ಧತೆಯನ್ನು ಮಾಡುತ್ತಾನೆ. ಇತ್ತ ಅವಳು ಮುಕುಂದನ ಬರುವಿಕೆಯ ನಿರೀಕ್ಷೆಯಲ್ಲೇ ಕಾಲ ಕಳೆಯುತ್ತಾಳೆ. ಹೆರಿಗೆಯಾದಾಗ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಒಂದು ವರ್ಷದ ನಂತರ ಮರಳಿ ಬರುವ ಮುಕುಂದನೊಂದಿಗೆ ಮದುವೆಯಾಗುತ್ತದೆ. ಅಲ್ಲಿಗೆ ತನ್ನ ಜವಾಬ್ದಾರಿ ಮುಗಿಯಿತು ಎಂದು ಭಾವಿಸುವ ಅವಳ ತಂದೆ ಮರುದಿನ ನಸುಕಿನಲ್ಲಿಯೇ ಇಡೀ ಊರನ್ನೇ ಬಿಟ್ಟು ಹೊರಟು ಹೋಗುತ್ತಾನೆ. ಹೋಗುವ ಮುಂಚೆ ಅವನು ಬರೆದಿಟ್ಟ ಪತ್ರದಲ್ಲಿ ತಾನು ತನ್ನ ಮಗಳ ನಿಜವಾದ ಜನ್ಮ ನೀಡಿದ ತಂದೆಯಲ್ಲ ಎಂದು ತಿಳಿಸಿ ಕಥಾನಾಯಕಿಯ ಜನ್ಮರಹಸ್ಯದ ನಿಗೂಢತೆಯನ್ನು ಸೃಷ್ಟಿಸುತ್ತಾನೆ. ಇದು ಕಥೆಯ ಅಂತ್ಯ. ಈ ಕಥೆಯ ಮೂಲಕ ರವಿಯವರು ಒಬ್ಬ ಆದರ್ಶ ತಂದೆಯ ಪರಿಕಲ್ಪನೆಯನ್ನು ಹಾಗೂ ತಂದೆ-ಮಗಳ ನಡುವೆ ಇರಬಹುದಾದ ಗೆಳೆತನ, ಪ್ರೀತಿಯನ್ನು ಚಿತ್ರಿಸಿದ್ದಾರೆ.

ಹೀಗೆ ರವಿಯವರು ತಮ್ಮ ವಿಭಿನ್ನ ರೀತಿಯ ಕಥಾವಸ್ತುವಿನಿಂದ ಹಾಗೂ ಆ ಕಥಾವಸ್ತುವನ್ನು ತುಂಬಾ ನಾಜೂಕಾಗಿ ಕಥೆಯನ್ನಾಗಿ ನೇಯಬಲ್ಲ ಕುಶಲತೆಯಿಂದಾಗಿ ಕನ್ನಡ ಕಥೆಗಾರರಲ್ಲಿಯೇ ವಿಶಿಷ್ಟವಾಗಿ ಕಾಣಿಸುತ್ತಾರೆ. ಅವರ ಕಥೆಗಳು ಆಪ್ತವಾಗಿ, ಗಾಢವಾಗಿ ಓದುಗರ ಮನಸ್ಸನ್ನು ತಟ್ಟುತ್ತವೆ.

ಇದೇ ಬಯಲು ಸೀಮೆಯ (ಹೈದ್ರಾಬಾದ್-ಕರ್ನಾಟಕ ಪ್ರದೇಶ) ಇನ್ನೊಬ್ಬ ಕಥೆಗಾರ ಕೇಶವ ಮಳಗಿ. ಕಥೆಗಾರ ಮೊಗಳ್ಳಿ ಗಣೇಶರವರು ಕೇಶವ ಮಳಗಿ ಹಾಗೂ ರವಿ ಬೆಳಗೆರೆ ಇವರಿಬ್ಬರ ಕಥೆಗಳನ್ನು ಕುರಿತಂತೆ ಹೀಗೆ ಹೇಳಿದ್ದಾರೆ...

'ಕೇಶವ ಮಳಗಿ ಮತ್ತು ರವಿ ಬೆಳಗೆರೆ ಈ ಇಬ್ಬರೂ ಕಥೆಗಾರರು ನಿರ್ಮಿಸುವ ಭಾವ ಪರಿಸರವು ದಟ್ಟವಾದ, ಆರ್ದ್ರವಾದ ಮನುಷ್ಯ ಸಂಬಂಧಗಳ ಹಂಬಲವನ್ನು ತೋರುತ್ತದೆ. ಇವರಿಬ್ಬರ ಸೃಜನಶೀಲತೆಯ ಬೇರು ಬಳ್ಳಾರಿಯಂಥ ಉರಿದಾರಿಯ ಒಳಗಿದ್ದರೂ ಇವರ ಸಂವೇದನೆಯ ನಿರೂಪಣೆಯು ವಿಸ್ತರಿಸಿಕೊಂಡು ಆಧುನಿಕ ಜಗತ್ತಿನ ಅನುಭವಗಳ ಮೂಲಕವೇ ಒಟ್ಟು ಕನ್ನಡದ ಕಥನ ನೆಲೆಗೆ ಆತುಕೊಳ್ಳುತ್ತಿವೆ. ರವಿ ಬೆಳಗೆರೆಯ ಮಾಂತ್ರಿಕ ಭಾವ ಲೋಕವು ಥಟ್ಟನೆ ಸೆಳೆದುಕೊಳ್ಳುತ್ತದೆ. ಈ ಇಬ್ಬರೂ ಕಥೆಗಾರರು ಇಂತಹ ಬರದ ಉರಿನಾಡಿನ ದಟ್ಟ ಅನುಭವಗಳನ್ನು ಯಾವುದೇ ಪಂಥ, ಪ್ರದೇಶ ಮುಂತಾದವುಗಳಿಗೆ ಹೊಂದಿಸದೇ ಬರೆಯುತ್ತಿರುವುದು ವಿಶೇಷ'[೧೮] ಎಂದಿದ್ದಾರೆ.

## ಭಾಷೆ

'ಸಾಹಿತ್ಯ ರಚನೆ' ಎಂಬುದು ಭಾಷೆಯಲ್ಲಿಯೇ ಮೈ ತಾಳುತ್ತದೆ. ಭಾಷೆ ಜೀವನಾನುಭವಗಳನ್ನು ಅಭಿವ್ಯಕ್ತಿಸುವ ಸಂವಹನ ಮಾಧ್ಯಮ. ಶೈಲಿ ಶಾಸ್ತ್ರಜ್ಞರು ಗುರುತಿಸಿರುವಂತೆ ಸಾಹಿತ್ಯವೆಂದರೆ ಅದರ ಭಾಷೆಯೇ ಆಗಿದೆ. ಕಥೆಗಳಲ್ಲಿನ ಪಾತ್ರಗಳನ್ನು, ಘಟನೆಗಳನ್ನು, ಸನ್ನಿವೇಶಗಳನ್ನು ಓದುಗನ ಅರಿವಿಗೆ ತಂದು ಕೊಡುವುದೇ ಭಾಷೆ. 'ಕಥೆಯ ರಚನೆ'ಗಾಗಿ ದುಡಿಯುವ ಭಾಷೆ ಕೇವಲ ಶಾಬ್ದಿಕ ರೂಪದ್ದಾಗಿರುವುದಿಲ್ಲ; ಅರ್ಥಪೂರ್ಣ ಘಟಕವಾಗಿರುತ್ತದೆ. ಅಂದರೆ ಕಥೆಯೊಂದರ ಭಾಷಿಕ ವಿಶ್ಲೇಷಣೆ ಎಂಬುದು ಘಟನೆ, ಪಾತ್ರ ಸನ್ನಿವೇಶಗಳನ್ನು ಕುರಿದ್ದೇ ಆಗಿರುತ್ತದೆ.

'ಕಥೆಗಾರ ತಾನು ಆಯ್ದುಕೊಂಡಿರುವ ವಸ್ತುವಿನ ಕಾಲ, ಘಟನೆ, ನಡೆಯುತ್ತಿರುವ ಸ್ಥಳ ಮತ್ತು ಪಾತ್ರಗಳಿಗೆ ಸಮಂಜಸವಾಗಿ ತಾಳೆಯಾಗುವ ಭಾಷೆಯನ್ನು ದುಡಿಸಿಕೊಳ್ಳಬೇಕಾಗುತ್ತದೆ. ಅಷ್ಟೇ ಅಲ್ಲದೇ ಭಾಷೆ ಮತ್ತು ಅದರ ಒಳ ಪ್ರಭೇದಗಳ ಪದರುಗಳನ್ನು ವಿನಿಯೋಗಿಸುವ ಮೂಲಕ (ಅಂದರೆ ಭಾಷೆಯಲ್ಲಿನ 'ಉಪಭಾಷಾ' ಸ್ತರಗಳು, ಜಾನಪದೀಯ ಸ್ತರಗಳು ಎಂದರ್ಥ) ಭಾಷೆಯಲ್ಲಿ ಸಾಕಷ್ಟು ಏಕರೂಪತೆಯನ್ನು ಕಾಯ್ದುಕೊಳ್ಳಬೇಕಾಗುತ್ತದೆ. ಕಥೆಯೊಳಗಿನ ಪಾತ್ರಗಳ ಸ್ಥಾನ, ಸ್ವಭಾವ, ವರ್ತನೆಗಳ ಅನ್ವಯ ಭಾಷೆ ಬಳಕೆಗೊಳ್ಳುವ ಸಾಧ್ಯತೆಗಳು ಹೆಚ್ಚು, ಅಂದ ಮೇಲೆ, ಭಾಷೆಯ ಕಥೆಯೊಳಗಿನ ವ್ಯಕ್ತಿಗಳ ಜೀವನಕ್ರಮ, ಸಾಮರ್ಥ್ಯ ಇವುಗಳನ್ನು ಅವಲಂಬಿಸಿರುತ್ತದೆ. ಆಗ ಗ್ರಾಂಥಿಕ ಹಾಗೂ ಆಡು ನುಡಿಗಳ ಸಂಯೋಜನೆಯಲ್ಲಿ ಸಮತೋಲನೆಯನ್ನು ಕಾಯ್ದುಕೊಳ್ಳಬೇಕಾಗುತ್ತದೆ.'[೧೯] ಈ ಹಿನ್ನೆಲೆಯಲ್ಲಿ ರವಿಯವರು ತಮ್ಮ ಕಥೆಗಳಲ್ಲಿ ಭಾಷೆಯನ್ನು ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ಮೂಲತಃ ರವಿಯವರು ಬಳ್ಳಾರಿಯವರಾಗಿದ್ದರೂ ತಮ್ಮ ಕೆಲವು ಕಥೆಗಳಲ್ಲಿ ಉತ್ತರ ಕರ್ನಾಟಕ ಭಾಷೆಯನ್ನು ತುಂಬಾ ಲೀಲಾಜಾಲವಾಗಿ ಬಳಸಿಕೊಂಡಿದ್ದಾರೆ. ಇದಕ್ಕೆ ಉದಾಹರಣೆಯಾಗಿ 'ಪಾ.ವೆಂ. ಹೇಳಿದ ಕಥೆ', 'ಮೈಕು',

'ವಿತಥ' ಇತ್ಯಾದಿ ಕಥೆಗಳನ್ನು ನೋಡಬಹುದು. ಬಳ್ಳಾರಿಯ ಪ್ರಾದೇಶಿಕ ಭಾಷೆಯನ್ನು ಕೂಡಾ ಅಷ್ಟೇ ಸಮರ್ಥವಾಗಿ ಬಳಸಿಕೊಂಡಿರುವುದಕ್ಕೆ ವಂಧ್ಯಾ, ಕೊನೆ, ಹಂತ, ಗಿಡ್ಡಾಂಜನೇಯ ಸ್ವಾಮಿ ಇತ್ಯಾದಿ ಕಥೆಗಳು ಸಾಕ್ಷಿಯಾಗುತ್ತವೆ. ರವಿಯವರ ಬಹುತೇಕ ಕಥೆಗಳ ಭಾಷೆಯಲ್ಲಿ ಇಂಗ್ಲಿಷ್ ಪದಗಳು, ವಾಕ್ಯಗಳು ವ್ಯಾಪಕವಾಗಿ ಬಳಕೆಯಾಗಿವೆ. ಬಳ್ಳಾರಿ ಪ್ರದೇಶ ಆಂಧ್ರದ ಗಡಿಭಾಗಕ್ಕೆ ಹತ್ತಿರವಾಗಿರುವುದರಿಂದ ಇಲ್ಲಿಯ ಜನರ ದೈನಂದಿನ ಜೀವನದಲ್ಲಿ ತೆಲುಗು ಭಾಷೆಯ ಬಳಕೆ ಸರ್ವೇ ಸಾಮಾನ್ಯ. ಇದು ಈ ಭಾಗದ ಸಾಹಿತಿಗಳು ಬಳಸುವ ಭಾಷೆಯಲ್ಲೂ ಇದರ ಪ್ರಭಾವ ಕಾಣಬಹುದು. ಆದರೆ ರವಿಯವರು ಚಲಂ, ಶ್ರೀ ಶ್ರೀ ರಂಥ ತೆಲುಗು ಸಾಹಿತಿಗಳಿಂದ ಪ್ರೇರಣೆಯನ್ನು ಪಡೆದಿದ್ದಾರೆಯೇ ಹೊರತು ತೆಲುಗು ಭಾಷೆಯ ಪ್ರಭಾವ ಅವರ ಇಡೀ ಕಥೆಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ತೀರಾ ವಿರಳವಾಗಿ ಒಂದೆರಡು ತೆಲುಗು ಪದಗಳು ಕಥೆಗಳಲ್ಲಿ ಬಳಕೆಯಾಗಿವೆ. 'ಹೀಗೊಬ್ಬಳು ಸೀತಾದೇವಿ' ಕಥೆ ಪೂರ್ತಿಯಾಗಿ ತೆಲುಗು ಪ್ರದೇಶವಾದ ಹೈದ್ರಾಬಾದ್‌ನಲ್ಲೇ ಘಟಿಸುತ್ತದೆಯಾದರೂ ಇಡೀ ಕಥೆಯಲ್ಲಿ ಎಲ್ಲಿಯೂ ತೆಲುಗು ಪದಗಳು ಅಥವಾ ಭಾಷೆಯ ಪ್ರಭಾವ ಇಲ್ಲಿ ಕಂಡುಬರುವುದಿಲ್ಲ. ಆದರೆ ಇಂಗ್ಲಿಷ್ ಭಾಷೆಯ ಬಳಕೆ ಈ ಕಥೆಯಲ್ಲಿ ದಟ್ಟವಾಗಿದೆ. 'ಕತ್ತಲೆ ನೋವು ಮತ್ತು ಹೆಣ' ಕಥೆಯಲ್ಲಿ ಹಿಂದಿ ಭಾಷೆ ಲಾಸ್ಯವಾಗಿದೆ. ಹೀಗೆ ಭಾಷೆಯ ವೈವಿಧ್ಯತೆಯ ಬಳಕೆ ರವಿಯವರ ಕಥೆಗಳಲ್ಲಿ ಕಂಡುಬರುತ್ತದೆ. 'ಒಬ್ಬ ಕಥೆಗಾರ ಏನು ಹೇಳಬೇಕೆಂದು ನಿರ್ಧರಿಸುವ ಜೊತೆಯಲ್ಲಿಯೇ ಅದನ್ನು ಹೇಗೆ ಹೇಳಬೇಕೆಂದೂ ನಿರ್ಧರಿಸಬೇಕಾಗುತ್ತದೆ. ಅದು ಸೃಜನಶೀಲತೆ, ಪ್ರಕ್ರಿಯೆಯ ಗುಣ. ಸೃಜನಶೀಲ ಕಥೆಗಾರ ಯಾವಾಗಲೂ ಅನುಭವ ಹಾಗೂ ಅಭಿವ್ಯಕ್ತಿಗಾಗಿ ಹಂಬಲಿಸುತ್ತಿರುತ್ತಾನೆ. ಜೊತೆಗೆ ಕಥೆಗಳ ಕಲಾತ್ಮಕ ಚೌಕಟ್ಟು ಮತ್ತು ಭಾಷಾ ಸಾಧ್ಯತೆಗಳ ಬಗ್ಗೆ ತನ್ನದೇ ಆದ ಕಲ್ಪನೆಗಳನ್ನು ಇರಿಸಿಕೊಂಡಿರುತ್ತಾನೆ. ಹೀಗಾಗಿ ಭಾಷೆಯ ಕಲಾತ್ಮಕ ಉಪಯೋಗ ಕಥೆಗಾರ ಆಯ್ದುಕೊಂಡ ವಸ್ತುವಿನಲ್ಲಿಯೇ ಸಾರ್ಥಕತೆಯನ್ನು ಪಡೆದುಕೊಳ್ಳಬೇಕಾಗುತ್ತದೆ'[೧೦] ಒಂದು ಭಾಷೆ ಆ ಕಥಾ ವಸ್ತುವಿನೊಂದಿಗೆ ಗಾಢವಾದ ಸಂಬಂಧವನ್ನು ಹೊಂದಿರುತ್ತದೆ. ರವಿಯವರು ತಮ್ಮ ಕಥೆಯಲ್ಲಿಯ ಭಾಷೆಯ ಬಳಕೆಯಲ್ಲಿ ಕೂಡಾ ತಮ್ಮ ಸೃಜನಶೀಲತೆಯನ್ನು ಮೆರೆದಿದ್ದಾರೆ. ರವಿಯವರ ಒಟ್ಟು ಕಥೆಗಳಲ್ಲಿನ ಭಾಷೆಯನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದು.

ರವಿ ಬೆಳಗೆರೆಯವರು ಎಂ.ಎ. (ಇತಿಹಾಸ) ಸ್ನಾತಕೋತ್ತರ ಪದವಿಗಾಗಿ ಓದಿದ್ದು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಲ್ಲಿ. ಹಾಗೂ ಇವರ ಪತ್ರಿಕೋದ್ಯಮದ ವೃತ್ತಿ ಜೀವನ ಆರಂಭವಾಗಿದ್ದು ಹುಬ್ಬಳ್ಳಿಯಲ್ಲಿ. ಇಲ್ಲಿ 'ಸಂಯುಕ್ತ ಕರ್ನಾಟಕ' ಹಾಗೂ 'ಕಸ್ತೂರಿ' ಪತ್ರಿಕೆಗಳಲ್ಲಿ ಕೆಲವು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದರಿಂದ ಈ ಉತ್ತರ ಕರ್ನಾಟಕದ ಭಾಷೆಯ ಪ್ರಭಾವ ರವಿಯವರ ಕೆಲವು ಕಥೆಗಳ ಮೇಲೆ ಆಗಿವೆ. ಈ ಕಥೆಗಳು ಕೂಡಾ ಪ್ರಾದೇಶಿಕವಾಗಿ ಉತ್ತರ ಕರ್ನಾಟಕಕ್ಕೆ ಸಂಬಂಧಿಸಿರುವುದನ್ನು ಇಲ್ಲಿ ಗಮನಿಸಬಹುದು.

ರವಿಯವರ ಪ್ರಮುಖ ಕಥೆ 'ಪಾ.ವೆಂ. ಹೇಳಿದ ಕಥೆ'ಯಲ್ಲಿ ಉತ್ತರ ಕರ್ನಾಟಕದ ಭಾಷೆಯನ್ನೇ ಬಳಸಿಕೊಳ್ಳಲಾಗಿದೆ. ಇಡೀ ಕಥೆ ನಡೆಯುವುದು ಹುಬ್ಬಳ್ಳಿಯಲ್ಲಿ. ಹೀಗಾಗಿ ಆ ಪ್ರಾದೇಶಿಕತೆಯ ಭಾಷಾ ಶೈಲಿ ಈ ಕಥೆಯಲ್ಲಿದೆ. ಈ ಕಥೆಯಲ್ಲಿ ಬರುವ ಪಾತ್ರಗಳು ಮಾತಾಡುವ ಸಂಭಾಷಣೆ ರೂಪದ ಮಾತುಗಳು ಮಾತ್ರ ಈ ಬಗೆಯದ್ದರೆ, ಸಂಭಾಷಣೆಗೆ ಪೂರಕವಾಗಿ ಕಥೆಗಾರ ಬಳಸುವ ಭಾಷೆ ಶಿಷ್ಟ (ಗ್ರಾಂಥಿಕ) ಭಾಷೆಯೇ ಆಗಿದೆ.

**ಉದಾ: ಕಥಾನಾಯಕಿ ಅಂಬುಜಾ ತನ್ನ ಗಂಡನ ಹತ್ತಿರ ಮಾತನಾಡುವ ಭಾಷೆಯ ಶೈಲಿ**

೧. 'ಮನೆಯಲ್ಲಿ ಕೂತು ಕೂತು ಬೇಸರಾಗಿ ಅದೊಂದು ದಿನ ಕಷ್ಟಪಟ್ಟು ಕೇಳಿದಳು "ಒಂದು ರೇಡಿಯೋನಾದ್ರೂ ತಂದು ಕೊಡ್ರಿ!".
"ಹಾಡ ಹಚ್ಚಿಕ್ಯಂಡು ಕುಣೀತೀಯೇನು? ಬಿದ್ದಿರು ಸುಮ್ನೆ... ಉತ್ತರವನ್ನು ತಣ್ಣನೆಯ ದನಿಯಲ್ಲಿ ಕರುಣಿಸಿದ್ದ.
"ಹ್ಯಾಗಿದ್ರೂ ಬಿ.ಎ. ಆಗ್ಯದ. ಎಂ.ಎ. ಕಟ್ತೇನಿ!" ಕೇಳಿದಳು.
"ನಿನ್ನ ಹಣೆ ಬರಕ್ಕ ಅದು ಬ್ಯಾರೆ ಕೇಡು..." ಗದರಿಸಿ ಗೋಡೆಯತ್ತ ಹೊರಳಿ ಮಲಗಿ ಬಿಟ್ಟ.

೨. "ಅಂಬೂ..." ಅಂದ. ಬದುಕಿನಲ್ಲಿ ಮೊದಲ ಬಾರಿಗೆ ಗಂಡನ ಬಾಯಲ್ಲಿ ತನ್ನ ಪ್ರೀತಿಯ 'ಅರ್ಧ ಹೆಸರು' ಕೇಳಿದ್ದಳು ಅಂಬುಜ.
"ಏನ್ರೀ" ಎನ್ನುತ್ತಾ ತುಂಬು ಮಮತೆಯಿಂದ ಬಂದು ಅವನ ಪಕ್ಕದಲ್ಲಿ ಕುಳಿತಳು.
"ಏನಾಗ್ಯದ... ಬಿಚ್ಚಿ ಹೇಳ್ರಿ, ಮನಸೀಗೆ ಹೌರಗ ಅನ್ನಸ್ತದ" ಅಂದಳು
"ಆಫೀಸಿನ್ಯಾಗ ಅನಾಹುತ ಆಗ್ಯದ" ಮೆಲುದನಿಯಲ್ಲಿ ಹೇಳಿದ.
"ಏನಾಗ್ಯದ?" ಅವಳ ದನಿಯಲ್ಲಿ ಕಾತರವಿತ್ತು.
"ಸಸ್ಪೆಂಡು ಮಾಡ್ಯಾರ!" ಅಂದವನೇ ಆಸರೆ ತಪ್ಪಿದವನಂತೆ ಅವಳ ಮಡಿಲಲ್ಲಿ ವಾಲಿಬಿಟ್ಟ.

ಈ ಸಂಭಾಷಣೆಯಲ್ಲಿರುವ ಭಾಷೆಯನ್ನು ಶಿಷ್ಟ ಕನ್ನಡದೊಂದಿಗೆ ಹೋಲಿಸಿ ನೋಡಿದಾಗ ಆ ಭಾಷೆಯ ವೈಶಿಷ್ಟ್ಯತೆಯನ್ನು ತಿಳಿಯಬಹುದು. ಸಾಮಾನ್ಯವಾಗಿ ಉತ್ತರ ಕರ್ನಾಟಕದ ಭಾಷೆಯಲ್ಲಿ ಪದದಲ್ಲಿಯ 'ಅ' ಅಥವಾ 'ಆ' ಕಾರಕ್ಕೆ 'ಯ'ಕಾರವು ಒತ್ತಕ್ಷರವಾಗಿ ವ್ಯಾಪಕವಾಗಿ ಬಳಕೆಯಾಗುತ್ತಿರುವುದನ್ನು ಈ ಮೇಲಿನ ಕಥೆಯ ಸಂಭಾಷಣೆಯಲ್ಲಿರುವ ಪದಗಳ ಮೂಲಕ ನೋಡಬಹುದು.

| ಶಿಷ್ಟ ಕನ್ನಡ | ಉತ್ತರ ಕರ್ನಾಟಕ ಭಾಷೆ |
|---|---|
| ಆಫೀಸ್‌ನಲ್ಲಿ | ಆಫೀಸ್‌ನ್ಯಾಗ |
| ಏನಾಗಿದೆ | ಏನಾಗ್ಯದ |
| ಮಾಡಿದ್ದಾರೆ | ಮಾಡ್ಯಾರ |
| ಹಚ್ಚಿಕೊಂಡು | ಹಚ್ಚಿಕ್ಯಂಡು |
| ಬೇರೆ | ಬ್ಯಾರೆ |
| ಆಗಿದೆ | ಆಗ್ಯದ |

ಶಿಷ್ಟ ಕನ್ನಡದ ಪದಗಳಲ್ಲಿಯ 'ಅ', 'ಆ', 'ಇ', 'ಏ', 'ಓ' ಕಾರಗಳು ಉತ್ತರ ಕರ್ನಾಟಕದ ಭಾಷೆಯಲ್ಲಿ 'ಅ' ಅಥವಾ 'ಆ'ಕಾರವಾಗಿ ಪರಿವರ್ತನೆಯಾಗುವುದರೊಂದಿಗೆ 'ಯ' ಕಾರವನ್ನು ಒತ್ತಕ್ಷರವನ್ನಾಗಿ ಪಡೆಯುವ ಪ್ರಕ್ರಿಯೆ ಇಲ್ಲಿ ನಡೆದಿರುವುದನ್ನು ಕಾಣಬಹುದು.

ಶಿಷ್ಟ ಕನ್ನಡದಪದದ ಅತ್ಯಂತ 'ಎ' ಕಾರವು ಉತ್ತರ ಕರ್ನಾಟಕ ಭಾಷೆಯಲ್ಲಿ 'ಅ' ಕಾರವಾಗಿ ಬದಲಾವಣೆ ಹೊಂದಿರುವುದನ್ನು ಈ ಕಥೆಯ ಸಂಭಾಷಣೆಯಲ್ಲಿ ಕಾಣಬಹುದು.

| ಶಿಷ್ಟ ಕನ್ನಡ | ಉತ್ತರ ಕರ್ನಾಟಕ ಭಾಷೆ |
|---|---|
| ಅನ್ನಿಸುತ್ತಿದೆ | ಅನ್ನಿಸ್ತದ |
| ಹಣೆ ಬರಹಕ್ಕೆ | ಹಣೆಬರಕ್ಕ |

ಇನ್ನು 'ಹಗುರ' ಎಂಬ ಶಿಷ್ಟ ಕನ್ನಡದ ಪದ ಉತ್ತರ ಕರ್ನಾಟಕ ಭಾಷೆಯಲ್ಲಿ 'ಹೌರಗ' ಎಂಬುದಾಗಿ ಬದಲಾವಣೆ ಹೊಂದಿರುವುದನ್ನು ಈ ಕಥೆಯ ಮೂಲಕ ತಿಳಿಯಬಹುದು.

ಬೆಳಗೆರೆಯವರ ಕಥೆಗಳಲ್ಲಿಯೇ ಉತ್ತರ ಕರ್ನಾಟಕದ ಭಾಷೆ ಮೈದುಂಬಿ ಹರಿದಿರುವುದು 'ಮೈಕು' ಕಥೆಯಲ್ಲಿ. ಕಥೆಯ ಕಥಾನಾಯಕ 'ವೀರಸಂಗಣ್ಣ ನಾಗಪ್ಪ ಹೂಗಾರ' ಎಂಬ ಹೆಸರೇ ಉತ್ತರ ಕರ್ನಾಟಕದ ವ್ಯಕ್ತಿಯನ್ನು ಪ್ರತಿನಿಧಿಸುತ್ತದೆ. ಇಡೀ ಕಥೆ ಹುಬ್ಬಳ್ಳಿಯಲ್ಲೇ ಘಟಿಸುತ್ತದೆಯಾದ್ದರಿಂದ ಅಲ್ಲಿಯ ಭಾಷೆಯ ಸೊಗಸು ಇಲ್ಲಿ ಅಕ್ಷರವಾಗಿ ಮೂಡಿದೆ. 'ಪಾ.ವೆಂ. ಹೇಳಿದ ಕಥೆ'ಯಂತೆಯೇ ಇಲ್ಲಿಯೂ ಕೂಡಾ ಕಥೆಯ ಪಾತ್ರ ಮಾತಾಡುವ ಸಂಭಾಷಣೆಯಲ್ಲಿ ಉತ್ತರ ಕರ್ನಾಟಕ ಭಾಷೆಯ ಬಳಕೆಯಾಗಿದೆಯೇ ಹೊರತು ಕಥೆಗಾರ ನಿರೂಪಿಸುವ ಭಾಷೆಯಲ್ಲಿ ಅಲ್ಲ. ಇದು ರವಿಯವರ ಎಲ್ಲಾ ಕಥೆಗಳಿಗೂ ಅನ್ವಯಿಸುತ್ತದೆ. ರವಿಯವರ ಕಥೆಗಳಲ್ಲಿ ಉತ್ತರ ಕರ್ನಾಟಕದ ಭಾಷೆಯೂ ಅಲ್ಲದ, ಬಳ್ಳಾರಿ ಕನ್ನಡವೂ ಅಲ್ಲದ ಶಿಷ್ಟ ಕನ್ನಡವೇ ಕಥೆಯ ನಿರೂಪಣೆಯ ಭಾಷೆ (ಕಥೆಯ ಪಾತ್ರಗಳು ಸಂಭಾಷಿಸುವ ಭಾಷೆಗೆ ಪೂರಕವಾಗಿ ಕಥೆಗಾರ ಬಳಸುವ ಭಾಷೆ)ಯಾಗಿ ಬಳಕೆಯಾಗಿದೆ. ಕುಂ.ವೀ. ಯಂತಹ ಕಥೆಗಾರರು ಕಥೆಯ ಪಾತ್ರಗಳು ಸಂಭಾಷಿಸುವ ಭಾಷೆ ಹಾಗೂ ಕಥೆಯ

ನಿರೂಪಣೆಯ ಭಾಷೆ ಇವೆರಡನ್ನೂ ಕೂಡಾ ಒಂದೇ ಭಾಷೆಯನ್ನಾಗಿ ಬಳಕೆ ಮಾಡುವುದನ್ನು ಗಮನಿಸಬಹುದು. ಸಾಮಾನ್ಯವಾಗಿ ಇಂತಹ ಕಥೆಗಳು ಪ್ರಾದೇಶಿಕತೆ ಅಥವಾ ಗ್ರಾಮೀಣತೆಯ ಸೊಗಡಿನಿಂದ ತುಂಬಿರುತ್ತವೆ.

ರವಿಯವರು ಕಥೆಯ ನಿರೂಪಣೆಗೆ ಶಿಷ್ಟ ಕನ್ನಡವನ್ನು ಬಳಸಿದರೂ ಅದು ಅವರ ಬರವಣಿಗೆಯಲ್ಲಿ ವಿಶಿಷ್ಟ ಕನ್ನಡವಾಗಿದೆ ಎಂದೇ ಹೇಳಬಹುದು. ಏಕೆಂದರೆ ಇವರ ಬಹುತೇಕ ಕಥೆಗಳಲ್ಲಿ ಇಂಗ್ಲಿಷ್ ಪದಗಳು, ವಾಕ್ಯಗಳು ಸಂಭಾಷಣೆಯಾಗುವುದರೊಂದಿಗೆ ನಿರೂಪಣೆಯಲ್ಲೂ ಬಳಕೆಯಾಗಿವೆ. 'ಮೈಕು' ಕಥೆ ಉತ್ತರ ಕರ್ನಾಟಕದ ಭಾಷೆಯನ್ನೇ ಮೈದುಂಬಿಕೊಂಡಿದ್ದರೂ ಇಂಗ್ಲಿಷ್‌ನಿಂದ ಬಿಡುಗಡೆ ಹೊಂದಿಲ್ಲ. ಇದರಲ್ಲಿ ಅನೇಕ ಇಂಗ್ಲಿಷ್ ಪದಗಳು ಬಳಕೆಯಾಗಿವೆ. ಕಥೆಯ ಶೀರ್ಷಿಕೆಯೇ ಒಂದು ಇಂಗ್ಲಿಷ್ ಪದ. ಅನೌನ್ಸ್‌ಮೆಂಟ್, ಕಂಟ್ರೋಲ್ ರೂಂ, ಪಾರ್ಕ್, ಬಸ್ಟ್ಯಾಂಡ್ ಮುಂತಾದ ಇಂಗ್ಲಿಷ್ ಪದಗಳ ಬಳಕೆ ಈ ಕಥೆಯಲ್ಲಿ ಆಗಿದೆ.

ಕಥೆಯ ನಿರೂಪಣೆಯಲ್ಲೂ ಇಂಗ್ಲಿಷ್ ಪದಗಳ ಬಳಕೆಯಾಗಿದೆ.

ಉದಾ: 'ಈ ಎಲ್ಲ ಹುಚ್ಚಾಟಗಳನ್ನು ಸಹಿಸಲು ಸಾಧ್ಯವೇ ಇಲ್ಲವೆಂದು ನಿರ್ಧರಿಸಿದ ಅಧಿಕಾರಿಗಳು ವೀರಸಂಗಪ್ಪನಿಗೊಂದು ಮೆಮೋ ಕೊಟ್ಟರು. ಅದನ್ನು ವೀರಸಂಗಣ್ಣ ಓದಲೂ ಇಲ್ಲ. ಎನ್‌ಕ್ವೈರಿಗೆ ಕರೆದರು; ಅವನು ಬರಲಿಲ್ಲ. ಆದರೆ ಒಂದು ದಿನ ಸಂಜೆ ಡ್ಯೂಟಿ ಮುಗಿಸಿ ಹೋಗುವ ಮುನ್ನ ಕಂಟ್ರೋಲರ್ ಸಾಹೇಬನ ಮುಂದೆ ನಿಂತು,

"ಮಂದಿ ಯಾಕ ಮೊದ್ಲಿನ ಹಂಗೆ ಬರವಲ್ರು?" ಕೇಳಿದ'

ಉತ್ತರ ಕರ್ನಾಟಕದ ಭಾಷೆಯ ಸೊಗಡನ್ನು ವೀರಸಂಗಪ್ಪ ನಾಗಪ್ಪ ಹೂಗಾರನ ಅನೌನ್ಸ್‌ಮೆಂಟ್‌ನಿಂದ ಇಲ್ಲಿ ನೋಡಬಹುದು.

೧. "ಹುಬ್ಬಳ್ಳಿ ಶಹರ ಬಸ್ ನಿಲ್ದಾಣದ ಸಮಸ್ತ ಪಿಕ್‌ಪಾಕೀಟು ಮಾಡುವ ಸೋದರ-ಸೋದರಿಯರೇ, ಭಿಕ್ಷುಕ-ಭಿಕ್ಷುಕಿಯರೇ ಎಚ್ಚರ! ಇತ್ತಿತ್ತಲಾಗಿ ಪ್ರಯಾಣಿಕರು ಹ್ಯಾಂಗ ಬೇಕಂದರ ಹಂಗ ಮೈ ಮರಿಯೋದಿಲ್ಲ. ಕಿಸೇದಾಗಿನ ಕೈ ತಗಿಯೂದಿಲ್ಲ. ಕಳವು ಮಾಡಿದಾಗ ಸಿಗೇ ಬಿದ್ರೆ ಎಲವು ಮುರೀದನs ಬಿಡೂದಿಲ್ಲ. ಎಚ್ಚರ ಇರ್ರಪಾ... ಹೇಳಿ ಕೇಳಿ ಇವತ್ತು ಆಯಿತವಾರ!"

೨. 'ತಾಯಂದಿರೇ, ಅಕ್ಕ ತಂಗಿಯರೇ ಗಮನಿಸಿ. ಹನ್ನೆರಡುವರಿಗೆ ಹೋಗುವ ಹಳಿಯಾಳ ಬಸ್ಸು ಹೋದರ ಹೋತು. ಇಲ್ಲಕ್ಕಾರ ಇಲ್ಲ. ಭಾಳ ತಲಿ ಕೆಡಿಸಿಕೋ ಬ್ಯಾಡ್ರಿ. ಅದೇ ವೇಳ್ಯಾಕ್ಕ ಒಂದು ಬಸ್ಸು ಮಂತ್ರಾಲಯಕ್ಕ ಹೋಗತದ. ಅಲ್ಲಿಗೇ ಹೋಗಿಬಿಡ್ರಿ, ರಾಯರ ದರ್ಶನ ಆದರ ಛಲೋನ ಆತು. ಆದರೆ ಹೋಗೂ ಮುಂದ ಕೂಸು ಕುನ್ನಿ ಕಳಕೊಂಡು ಹೋಗಬ್ಯಾಡ್ರೀ. ಹುಬ್ಬಳ್ಯಾಗಿನ ಭಿಕ್ಷಾದೋರ, ಮಕ್ಕಳ್ನ ಛಲೋ ಜೋಪಾನ

ಮಾಡೂದಿಲ್ಲ. ಪೊಲೀಸು, ಭಿಕ್ಷಾದವರ್ನ ಮಕ್ಕಳಗಿಂತ ಛಲೋ ಜೋಪಾನ ಮಾಡ್ತಾರ! ಮಕ್ಕಳೇಮನೆಗೆ ಮಾಣಿಕ್ಯ! ಬಸ್ಟ್ಯಾಂಡಿಗೆ ಪೊಲೀಸರೇ ಮಾಣಿಕ್ಯ! ಜೈಹಿಂದ್...!' ಅಂದು ಬಿಟ್ಟ.

ಉತ್ತರ ಕರ್ನಾಟಕದ ಈ ಭಾಷೆಯನ್ನು ಶಿಷ್ಟ ಕನ್ನಡದಲ್ಲಿ ಹೀಗೆ ನೋಡಬಹುದು.

| **ಶಿಷ್ಟ ಕನ್ನಡ** | **ಉತ್ತರ ಕರ್ನಾಟಕ ಭಾಷೆ** |
|---|---|
| ಹೇಗೆ ಬೇಕೆಂದರೆ ಹಾಗೆ | ಹ್ಯಾಂಗ ಬೇಕಂದ್ರ ಹಂಗ |
| ಮೈ ಮರೆಯುವುದಿಲ್ಲ | ಮೈ ಮರಿಯೋದಿಲ್ಲ |
| ಕೈ ತಗೆಯುವುದಿಲ್ಲ | ಕೈ ತಗಿಯೂದಿಲ್ಲ |
| ಸಿಕ್ಕು ಬಿದ್ದರೆ | ಸಿಗೇ ಬಿದ್ರೆ |
| ಎಲುಬು | ಎಲುವು |
| ಮುರಿಯದೇ | ಮುರೀದನ |
| ಬಿಡುವುದಿಲ್ಲ | ಬಿಡೂದಿಲ್ಲ |
| ಹೋಯ್ತು | ಹೋತು |
| ಇಲ್ಲದಿದ್ದರೆ | ಇಲ್ಲಿಕ್ಕಾರ |
| ಬಹಳ | ಭಾಳ |
| ತಲೆ | ತಲಿ |
| ಕೆಡಿಸಿಕೊಳ್ಳಬೇಡಿ | ಕೆಡಿಸಿಕೋ ಬ್ಯಾಡ್ರಿ |
| ವೇಳೆಗೆ | ವೇಳ್ಯಾಕ್ಕ |
| ಆಯ್ತು | ಆತು |
| ಚೆನ್ನಾಗಿ | ಛಲೋ |
| ಹೋಗುವ ಮುಂಚೆ | ಹೋಗೂ ಮುಂದ |

ಉತ್ತರ ಕರ್ನಾಟಕ ಭಾಷೆಯನ್ನು ಒಳಗೊಂಡ ಮತ್ತೊಂದು ಕಥೆ 'ವಿತಥ'. ಕಥಾನಾಯಕಿ ಅನುಸೂಯಾಳ ಗಂಡ ಅಚ್ಚಿಯ ತಂದೆ ಸನ್ನಿಯಿಂದ ಹಾಸಿಗೆ ಹಿಡಿದಿದ್ದು ಅವನು ಬಡಬಡಿಸುವ ಮಾತುಗಳನ್ನು ಇಲ್ಲಿ ಗಮನಿಸಬಹುದು.

೧. "ನಾಗ್ರ ಹಾಂವು ಮೂಡ್ಯಾದಂತ... ಫಟಸರ್ಪದ ನಾಗರ ಹಾಂವು... ಕಮಲಮಂಗಿ ಕ್ರಿಷ್ಟ, ಸೂದ್ರ ಮಂದೀ ಮನಿಯೊಳಗ ಮುಂಗಲಿ ಹುಡಕಲಿಕ್ಕ ಹೋಗ್ಯಾನಂತೆ... ನಿನ

ಗಂಡ ಬಂದ್ನೇನೇ ಅನಸಿ, ಮದ್ಲು ಎದ್ದು ಬಂದು ಬಲ ಬಾಗಿಲ ಹಾಕ್ಯ.. ಒಳಗೆ ಬಂದೀತು ಹಾಂವು!" ಮುದುಕ ಅದೇ ಸನ್ನಿಯಲ್ಲಿ ಬಡಬಡಿಸುತ್ತಿದ್ದ.

೨. 'ಅನಸೀ ಬಾರೇ... ಉಚ್ಚಿ ಹೊಯ್ಕಂಡೀನಿ, ಎತ್ತು ಬಾರೇ. ಬೆನ್ನ ಬುಡುಕ ನೀರು ಹೋಗ್ಯಾವೆ... ಸಿಪ್ಪೀ ಸುಲೀತದೆ ಸಿಪ್ಪೀ! ನಾಗರ ಹಾವಿನ ಸಿಪ್ಪೀ ಹಾಂಗ ಮೈಯೆಲ್ಲಾ ಸುಲ್ದು ಹೋಗ್ತದ ಎತ್ತು ಬಾರೇ!' ಇದಕ್ಕಿದ್ದಂತೆ ಮುದುಕ ಒದರತೊಡಗಿದ.

ಈ ಮೇಲಿನ ಸಂಭಾಷಣೆಯ ಪದಗಳನ್ನು ಶಿಷ್ಟ ಕನ್ನಡದ ಪದಗಳೊಂದಿಗೆ ಹೋಲಿಸಿ ನೋಡಿದಾಗ ವ್ಯತ್ಯಾಸ ತಿಳಿಯುತ್ತದೆ. ಶಿಷ್ಟ ಕನ್ನಡದಲ್ಲಿ ಪದಾಂತ್ಯ 'ಎ' ಕಾರವು ಉತ್ತರ ಕರ್ನಾಟಕ ಭಾಷೆಯಲ್ಲಿ 'ಇ' ಕಾರವಾಗಿ ಬದಲಾವಣೆಯಾಗಿರುವುದನ್ನು ಈ ಸಂಭಾಷಣೆಯಲ್ಲಿ ಕಾಣಬಹುದು.

ಉದಾ: ಶಿಷ್ಟ ಕನ್ನಡದ ಸಿಪ್ಪೆ, ಉಚ್ಚೆ, ಮನೆ ಈ ಪದಗಳು ಉತ್ತರ ಕರ್ನಾಟಕ ಭಾಷೆಯಲ್ಲಿ ಸಿಪ್ಪಿ, ಉಚ್ಚಿ, ಮನಿ ಪದಗಳಾಗಿ ಪರಿವರ್ತನೆಯಾಗಿವೆ.

ಶಿಷ್ಟ ಕನ್ನಡ ಅವನು, ಇವನು ಎಂಬ ಸರ್ವನಾಮಗಳು ಉತ್ತರ ಕರ್ನಾಟಕ ಭಾಷೆಯಲ್ಲಿ ಅಂವ, ಇಂವ ಎಂಬುದಾಗಿ ಬದಲಾವಣೆ ಹೊಂದುತ್ತವೆ. ಅದರಂತೆ ಇಲ್ಲಿ 'ನಾಗರ ಹಾವು' ಎಂಬ ಶಿಷ್ಟ ಕನ್ನಡ ಪದ 'ನಾಗ್ರಹಾಂವು' ಎಂಬುದಾಗಿ ಬದಲಾಗಿದೆ.

ಹೋಟೆಲು ಕಾರ್ಮಿಕರ ಶೋಷಣೆಯನ್ನೊಳಗೊಂಡ 'ದಾರಿ' ಕಥೆ ಕೂಡಾ ಉತ್ತರ ಕರ್ನಾಟಕದ ಭಾಷೆಯನ್ನೇ ಒಳಗೊಂಡಿದೆ. ಇಡೀ ಕಥೆ ಹುಬ್ಬಳ್ಳಿಯ ಹೋಟೆಲೊಂದರಲ್ಲಿ ನಡೆಯುವುದರಿಂದ ಆ ಭಾಷೆ ಇಲ್ಲಿ ಸಹಜವಾಗಿ ಮೂಡಿಬಂದಿದೆ.

ಉದಾ: 'ಲೇ ತಮ್ಮಗೋಳ್ರಾ... ಬ್ಯಾರೆ ಏನೂ ಕೆಲ್ಸ ಇಲ್ದಾಗ ಮಾತಾಡೀರಂತ! ಹೀಂಗ ಗಿರಾಕಿ ಬರೂ ಹೊತ್ನ್ಯಾಗ ಮಾತಾಡಿಕೋತ ನಿಂತ್ರ ಕೆಲಸ ಆಗೂದಿಲ್ಲ. ನಡ್ರಿ ನಡ್ರಿ ಕೆಲಸ ನೋಡ್ರಿ' ಎಂದು ಅಗಲ ಮೀಸೆಯವನು ಗದರಿದಾಗ ನಾವು ಗೊಣಗುತ್ತಾ ಚದುರಿದ್ದೆವು. ರಾತ್ರಿ ಕಬ್ಬಡ್ಡಿ ಮುಗಿದ ಮೇಲೆ ಎಲೆ ತಿನ್ನಲು ಹೋದಾಗ ಶಂಕ್ರು ಅಂದಿದ್ದ.

'ಮೀಸಿ ಬಿಟ್ಕೊಂಡು ಗದರಿಸ್ತಿದ್ನಲ್ಲ? ಆ ಮಿಂಡ್ರಿಗ್ಹುಟ್ಟಿದೋನೆಸ್ರು ಪಟ್ಟಣಶೆಟ್ಟೀ ಅಂತ. ಮದ್ಲು ಇಲ್ಲೇ ಸಪ್ಲೈಯರಾಗಿದ್ದ. ಮದ್ವಿ ಆದ್ಮ್ಯಾಲ ಮ್ಯಾನೇಜರಾಗ್ಯನ. ಅವನ್ಹೆಂಡ್ತಿ ಮತ್ತ ನಮ್ ಸಾವ್ಕಾರ 'ಜಾಯಿಂಟ್'!' ತನ್ನ ಎರಡೂ ತೋರು ಬೆರಳುಗಳನ್ನು ಕೊಕ್ಕೆಯಂತೆ ಮಾಡಿ ತೋರಿಸಿದ್ದ ಶಂಕ್ರು.

'ಭಾರಿ ಜೋರು ಮಾಡ್ತಾನ. ನಾನೊಂದ್ಸಲ ಒದ್ಯಾಕ್ಹೋಗಿದ್ದೆ. ಅವತ್ತು ಎಲ್ಲಾರು ಬಂದು ಬಿಡಸ್ಕ್ಯಂಡ್ರು. ಇಲ್ದಿದ್ರೆ ಪಟ್ರುಗುಟ್ಹಂಗ್ ಒದೀತಿದ್ದೆ. ಮಿಂ...'

ಎಲ್ಲಾ ಹೋಟೆಲ್ಲೂ ಹೀಗೆ! ಮೇಲೆ ತಿವಿಯುವನೊಬ್ಬನಿದ್ದೇ ಇರ್ತಾನ ಎಂದುಕೊಂಡೆ...

'ದಾರಿ ಕಥೆಯ ಈ ಸಂಭಾಷಣೆಯು ಸಂಪೂರ್ಣವಾಗಿ ಉತ್ತರ ಕರ್ನಾಟಕದ ಭಾಷೆಯೇ ಆಗಿದೆ. 'ಪಾ.ವೆಂ. ಹೇಳಿದ ಕಥೆ', 'ಮೈಕು', 'ವಿತಥ' ಕಥೆಗಳ ಸಂಭಾಷಣೆಯಲ್ಲಿನ ಭಾಷೆಯ ಮೇಲೆ ಮಾಡಿದ ಚರ್ಚೆಯ ಅಂಶಗಳೇ ಈ ಕಥೆಯ ಭಾಷೆಗೂ ಅನ್ವಯಿಸುತ್ತದೆ.

ರವಿ ಬೆಳಗೆರೆಯವರು ಮೂಲತಃ ಬಳ್ಳಾರಿಯವರೇ ಆಗಿದ್ದರಿಂದ ಬಳ್ಳಾರಿ ಭಾಷೆಯೂ ಅವರ ಕಥೆಗಳಲ್ಲಿ ಕಾಣಿಸಿಕೊಂಡಿದೆ. ಅಂತಹ ಕಥೆಗಳು ಬಳ್ಳಾರಿ ಪ್ರದೇಶಕ್ಕೆ ಸಂಬಂಧಿಸಿದವುಗಳಾಗಿವೆ. 'ಹಂತ', 'ವಂಧ್ಯಾ', 'ವೇಷಗಳು', 'ನೆರಳು', 'ಗಿಡ್ಡಾಂಜನೇಯ ಸ್ವಾಮಿ', 'ಕೊನೆ' ಈ ಕಥೆಗಳಲ್ಲಿನ ಪಾತ್ರಗಳ ಸಂಭಾಷಣೆಗೆ ಬಳ್ಳಾರಿ ಭಾಷೆಯನ್ನೇ ಬಳಸಲಾಗಿದೆ.

ಜೋಗಪ್ಪ-ಜೋಗತಿಯರ ಕರಾಳ ಬದುಕನ್ನು ಚಿತ್ರಿಸುವ ಕಥೆ 'ಹಂತ'. ಇಡೀ ಕಥೆ ಘಟಿಸುವುದು ಬಳ್ಳಾರಿ ಜಿಲ್ಲೆಯ ಹೊಸಪೇಟೆ ಹತ್ತಿರದ ಹುಲಿಗಿಯಲ್ಲೇ. ಆದ್ದರಿಂದ ಬಳ್ಳಾರಿ ಭಾಷೆ ಇಲ್ಲಿ ಸಹಜವಾಗಿ ಬಳಸಿದ್ದಾರೆ. ಕಥೆಯಲ್ಲಿನ ಪಾತ್ರಗಳ ಸಂಭಾಷಣೆಯನ್ನು ಇಲ್ಲಿ ಗಮನಿಸಿದಾಗ ಬಳ್ಳಾರಿ ಭಾಷೆಯ ವೈಶಿಷ್ಟ್ಯತೆ ತಿಳಿಯುತ್ತದೆ.

ಉದಾಹರಣೆಗೆ 'ಹಂತ' ಕಥೆಯ ಈ ಕೆಳಗಿನ ಸಂಭಾಷಣೆಯನ್ನು ನೋಡಬಹುದು.

೧. 'ಪ್ಚ್...ಪ್ಚ್... ಪಾಪ ಜೋಗಮ್ಮನ್ನ ಕೊಂದಾಕಿ ಬಿಟ್ಟಾರಲೇ ಕಳ್ರು! ಅಲ್ಲೋ ಯಪ್ಪಾ, ಈ ದಾರ್‍ಯಾಗ್ ಯಾಕ್ ಬಂದಿದ್ದೀಯಾದೀತು? ಇಲ್ಲಿ ಕಳ್ರ ಕಾಟ ಐತೆಂತ ಗೊತ್ತಿಲೇನಪಾ? ಓಗ್ಲಿ ಬಿಡು ಎದ್ದೇಳು. ಸತ್ತೋದಾಕಿ ಪುಣ್ಯಾತಗಿತ್ತಿ. ಆ ಏಳು ಗುಡ್ಡದ ಯಲ್ಲಮ್ಮನ್ನೇ ಸ್ವಂತ ಮಗ ಪರಶಿರಾಮ ಕಡ್ಡಾಕಿ ಬುಟ್ನಂತೆ! ನಮ್ಮಂತಾ ಮನಿಶಾರ್ದೇನೈತೆ? ಏಳು ಏಳು... ಪಾಪ ಮಗಳಿನ್ನಾ ಸಣ್ಣಾಕಿ ಅದಳಾ. ಆಯಮ್ಮನ್ನೇ ಬೇಸು ಜ್ವಾಪಾನ ಮಾಡು, ಏಳು!' ಎಂದನೊಬ್ಬ. ಫಕೀರಪ್ಪ ಅಳುತ್ತಲೇ ಇದ್ದ.

೨. ನೋಡಾ ಯೆಂಕ್ಟ, ನನ ಮಗಳಂತ ನಾನೇನು ಹೇಳಿಕ್ಯಂಬಾದಿಲ್ಲ. ನನ್ನೆಂಡ್ತಿ ಸತ್ತಾಗ ಈಕಿ ಆರು ವರಸದಾಕಿ. ಆವಾಗಿಂದ ಜೋಪಾನ ಮಾಡಿಕ್ಯಂತ ಬಂದೀನಿ. ಇಲ್ಲೇ ವುಲಿಗ್ಯಾಗೆ ಬಾಳೇವು ಮಾಡಿದ್ರ ಸೈತ ಕೆಟ್ಟಿಲ್ಲ. ಭಾಳ ಶೀಲವಂತಿ ಉಡುಗಿ. ಬರಾ ತಿಂಗಳ ಜಾತ್ರ್ಯಾಗ ಎಂಗಾರ ಮಾಡಿ ಮುತ್ತು ಕಟ್ಟಿಸಾಣ ಅಂತ ಅದೀನಿ. ಇನ್ನ ಅದಾದ ಮೇಲೆ ಎಂಗಿದ್ರೇನಂತೆ? ನಿನಿಗ್ಯಾರರ ಛಲೋ ಮನಿಷಾ ಗೊತ್ತಿದ್ರ ನೋಡು. ರೊಕ್ಕಸ್ತ ಆಗಿರ್ಬೇಕು. ಜಾತ್ರೀಗೆ ಬಂದು ಬಿಡ್ಲಿ. ಎಲ್ಡು ನೈಲಾನ ಸೀರಿ ಇನ್ನೂರು ರೂಪಾಯಿ ಕೊಟ್ಟು ಅದ್ನೈದು ದಿನ ಇಲ್ಲೇ ಇದ್ದು ಓಗ್ಲಿ. ರೊಕ್ಕ ಮಾತ್ರ ಮೊದಲಾ ಕೊಡಬೇಕು'.

ಈ ಮೇಲಿನ ಸಂಭಾಷಣೆಯಲ್ಲಿರುವ ಕೆಲವು ಪದಗಳು ಉತ್ತರ ಕರ್ನಾಟಕದ ಭಾಷೆಯಂತೆ ಧ್ವನಿಸಿದರೂ ಆ ಭಾಷೆಗಿಂತ ಬಳ್ಳಾರಿ ಭಾಷೆ ತುಂಬಾ ವಿಭಿನ್ನವಾಗಿದೆ. ಬಳ್ಳಾರಿಯ ಭಾಷೆಯಲ್ಲಿ ಕಂಡುಬರುವ ಮೊದಲ ಲಕ್ಷಣವೇ ಅಲ್ಪಪ್ರಾಣ-ಮಹಾಪ್ರಾಣಗಳ ಬಳಕೆ. ಬಳ್ಳಾರಿ ಪ್ರದೇಶದ ದೈನಂದಿನ ಜನ ಜೀವನದಲ್ಲಿ ಮಾತಾಡುವಾಗ ಮಹಾಪ್ರಾಣಗಳ

ಬಳಕೆ ತುಂಬಾ ಕಡಿಮೆ. ಮಹಾಪ್ರಾಣಗಳ ಬದಲಿಗೆ ಅಲ್ಪಪ್ರಾಣವನ್ನೇ ಬಳಸಲಾಗುತ್ತದೆ. ಅದನ್ನು ಈ ಮೇಲಿನ 'ಹಂತ' ಕಥೆಯ ಸಂಭಾಷಣೆಗಳ ಮೂಲಕ ಗುರುತಿಸಬಹುದು.

ಶಿಷ್ಟ ಕನ್ನಡದ ಪದಾದಿಯ ಮಹಾಪ್ರಾಣ ಅಕ್ಷರವು ಬಳ್ಳಾರಿ ಕನ್ನಡದಲ್ಲಿ ಅಲ್ಪಪ್ರಾಣವಾಗಿ ಮಾರ್ಪಟ್ಟಿದೆ.

| **ಶಿಷ್ಟ ಕನ್ನಡ** | **ಬಳ್ಳಾರಿ ಕನ್ನಡ** |
|---|---|
| ಹೋಗ್ಲಿ ಬಿಡು | ಓಗ್ಲಿ ಬಿಡು |
| ಹುಡುಗಿ | ಉಡುಗಿ |
| ಹೇಗಾದರೂ | ಎಂಗಾರ |
| ಹೇಗಿದ್ದರೇನಂತೆ | ಎಂಗಿದ್ರೇನಂತೆ |
| ಹದಿನೈದು | ಅದ್ನೈದು |
| ಅಪ್ಪಾ | ಯಪ್ಪಾ |
| ಹುಲಿಗಿ (ಸ್ಥಳನಾಮ) | ವುಲಿಗಿ (ಸ್ಥಳನಾಮ) |

ಬಳ್ಳಾರಿ ಪ್ರದೇಶದ ಕೆಲವು ವಿಶಿಷ್ಟ ಪದಗಳು ಈ ಕಥೆ (ಹಂತ)ಯಲ್ಲಿ ಕಂಡುಬರುತ್ತವೆ.

೧. **ಐತಿ:** ಇದು 'ಶಿಷ್ಟ ಕನ್ನಡದ 'ಇದೆ' ಎಂಬ ಪದಕ್ಕೆ ಬಳಸಲಾಗುತ್ತದೆ.

೨. **ಬೇಸು:** ಇದು ಶಿಷ್ಟ ಕನ್ನಡದ 'ಭೇಷ್' ಎಂಬ ಪದದಿಂದ ಹುಟ್ಟಿದ್ದು, ಬಳ್ಳಾರಿಗರ ಕನ್ನಡದಲ್ಲಿ ಬೇಸ್, ಬೇಸು ಎಂಬುದಾಗಿ ಬಳಕೆಯಾಗುತ್ತದೆ. ಶಿಷ್ಟ ಕನ್ನಡದ 'ಚೆನ್ನಾಗಿದೆ' ಎಂಬ ಪದಕ್ಕೆ ಬಳ್ಳಾರಿಗರು 'ಬೇಸೈತಿ' ಎಂಬ ಪದ ಬಳಸುತ್ತಾರೆ.

೩. **ಹೇಳಿಕ್ಯಂಬಾದಿಲ್ಲ:** ಇದು ಬಳ್ಳಾರಿ ಭಾಗದ ಜನರು ಬಳಸುವ ವಿಶಿಷ್ಟ ಪದವಾಗಿದೆ. ಶಿಷ್ಟ ಕನ್ನಡದ 'ಹೇಳಿಕೊಳ್ಳವುದಿಲ್ಲ' ಎಂಬ ಪದವೇ ಬಳ್ಳಾರಿ ಕನ್ನಡದಲ್ಲಿ 'ಹೇಳಿಕ್ಯಂಬಾದಿಲ್ಲ' ಆಗಿದೆ. ಅದರಂತೆ ಉಂಬಾದಿಲ್ಲ (ಉಣ್ಣುವುದಿಲ್ಲ) ತಿಂಬಾದಿಲ್ಲ (ತಿನ್ನುವುದಿಲ್ಲ) ಇತ್ಯಾದಿ ಪದಗಳು ಬಳಕೆಯಾಗುತ್ತವೆ.

೪. **ರೊಕ್ಕ:** ಇದು ಶಿಷ್ಟ ಕನ್ನಡದ 'ಹಣ', 'ದುಡ್ಡು' ಎಂಬ ಪದಕ್ಕೆ ಬಳ್ಳಾರಿ ಭಾಗದಲ್ಲಿ 'ರೊಕ್ಕ' ಎಂಬುದಾಗಿ ಬಳಸಲಾಗುತ್ತದೆ. ಹಣವನ್ನು ಹೊಂದಿದವನಿಗೆ (ಶ್ರೀಮಂತ) 'ರೊಕ್ಕಸ್ತ' ಎಂದು ಕರೆಯಲಾಗುತ್ತದೆ.

೫. **ಸೈತ:** ಇದು ಶಿಷ್ಟ ಕನ್ನಡದ 'ಸಹಿತ' ಎಂಬ ಪದದಿಂದ ಹುಟ್ಟಿದೆ. ಬಳ್ಳಾರಿ ಕನ್ನಡದಲ್ಲಿ 'ಸೈತ' ಆಗಿದೆ.

೬. **ಬಾಳೇವು:** ಶಿಷ್ಟ ಕನ್ನಡದ ಬಾಳ್ವೆ (ಜೀವನ ನಿರ್ವಹಣೆ) ಪದ ಬಳ್ಳಾರಿ ಭಾಗದ ಜನರಲ್ಲಿ 'ಬಾಳೇವು' ಎಂಬುದಾಗಿ ಬಳಸಲ್ಪಡುತ್ತದೆ.

'ಹಂತ' ಕಥೆಯ ಕಥಾ ವಸ್ತುವೇ ಬಳ್ಳಾರಿ ಪ್ರದೇಶದ್ದಾಗಿದ್ದರಿಂದ ಈ ರೀತಿಯ ಅನೇಕ ಪದಗಳು ಕಥೆಯಲ್ಲಿ ಮಿಳಿತವಾಗಿವೆ. ಬಳ್ಳಾರಿ ಭಾಷೆಯನ್ನೇ ಒಳಗೊಂಡ ಇನ್ನೊಂದು ಕಥೆ 'ಗಿಡ್ಡಾಂಜನೇಯ ಸ್ವಾಮಿ'. ಇಡೀ ಕಥೆ ಬಳ್ಳಾರಿ ನಗರದಲ್ಲೇ ನಡೆಯುವುದರಿಂದ ಇಲ್ಲಿನ ಸಂಭಾಷಣೆಗಳು ಬಳ್ಳಾರಿಯ ಭಾಷೆಯಲ್ಲಿಯೇ ರಚಿತವಾಗಿವೆ.

ಉದಾ ೧. 'ತೋರಿಸಿಕೊಂಡು ಬರಾದು ಆಮ್ಯಾಲಿನ ಮಾತು ಮೊದಲು ಮನ್ಯಾಗಿನ ಪರಿಸ್ಥಿತಿ ಹೇಳು. ಮದ್ವಿ ಆಗಿ ಬಂದು ಎಂಟಾದವು ವರ್ಷ. ಒಂದೆಡೆ ಜಾತ್ರಿ, ಒಂದು ಪರಿಸೆ, ಒಂದು ದೇವರು, ಒಂದು ತಿರುಗಾಟ–ಎಲ್ಲಿಗನ್ನ ಕರ್ಕಂಡು ಓಗಿದ್ಯಾ? ಇದ್ದಷ್ಟು ದಿವಸ ನಿಮ್ಮಮ್ಮಗೆ ಮಾಡಿದ ಸೇವೆ. ಸತ್ಗಲ್ಲಾ ಶಿವನೇ ಅಂತ ಉಸರು ಬಿಡಂಬದರೊಳಗಾಗಿ ನಿಮ್ಮಪ್ಪಂಬಾತ ತೀರಿಕೊಂಡ. ಆಯ್ತು ಬಿಡೂ, ಅವರವರ ಪುಣ್ಯ. ಒರಿಸಿಕ್ಕೊಂಡು ಒಂದಷ್ಟು ದಿನ ಇರ್ತಾರ. ಸಂಜಿ ಮುಗುದ ಮ್ಯಾಲೆ ಹೋಗ್ತಾರ. ಹೋಗ್ಲಿ. ಇವಾಗ ನೋಡು ಸೋಲುಪ ಕುಂತು, ಉಂಡು, ಅಡ್ಡಾಡಿ ಸುಖ ಪಡಾ ಕಾಲ, ನನ್ ತಾಯಿ ಅಂಬೋಳು ಜತೀಗಿದ್ರೆ ನನಿಗೂ ಕೆಲಸ ಕಡಿಮೆ. ಕೇಳಿದ್ದು ಮಾಡಿ ಹಾಕ್ತಾಳ. ಉಂಡು, ಸೊಲ್ಪ ಮೈ ಬಿಟ್ರೆ ನನಗೂ ಆಗದೆ ಇರ್ತದಾ ಮಕ್ಕಳೂ? ಮಾತೆತ್ತಿದ್ರೆ ಡಾಕ್ಟ್ರಿಗೆ ತೋರಿಸಿಕೊಂಡು ಬಾ, ಅವರಿಗೆ ತೋರಿಸಿಕೊಂಡು ಬಾ ಅಂತೀದಿ. ನೀನು ಯಾವತ್ತನ ಸನೇಕ ಬಂದು, ಒಂದು ರಾತ್ರಿ, ಒಂದು ಮಧ್ಯಾನ್ನ ಇಂಥದ್ದು ಬೇಕು ಅಂತ ಕೈ ಚಾಚೀಯಾ? ಮೈ ದುಡಚೀಯಾ? ನಿನಗೆ ನಿಂದೇ ವಲ್ಲರಿ. ನಾನ್ಮಾತು ಕೇಳು. ಅಮ್ಮ ಇಲ್ಲಿ ಇವಾಗಿರೋ ಹಂಗೆ ಇರ್ಲಿ. ನಾಳೆ ನನಿಗೂ ಮಕ್ಕಳಾಗತಾವೆ. ಆಗದಂಗಿರ್ತವಾ? ಇದ್ದು ನೋಡಿಕ್ಕಂತಾಳೆ... ನೀನು ಸುಮ್ನೆ ತಕರಾರು ತೆಗೀಬ್ಯಾಡ ನಡೀ. ನಾನು ದೇವರಿಗೆ ಸಣದು ಬರ್ತೀನಿ' ಅಂದಿದ್ದಳು.

೨. 'ಇನ್ನ ಒರಗಿಂತ ಎಣ್ಣು ತರಾದೇನೈತೀ, ನಮ್ಮುಡುಗೀಗೆ ಬ್ಯಾರೆ ಗಂಡು ನೋಡಾದೇನೈತಿ? ಆತೇನು ಕುರುಡನಾ, ಕುಂಟನಾ? ಪೂರಾ ಬಳ್ಳಾರಿಯಾಗಿಲ್ಲ ಅಂತಾ ಸೋಡಾಫ್ಯಾಕ್ಟರಿ! ಇಬ್ಬರು ಎಂಡ್ರನ್ನ ಮಾಡಿಕೊಂಡೋರು ಯಾರೂ ಇಲ್ಲೇನು? ಅಂತ ಪರಶಿವನೇ ಎರಡು ಮಾಡಿಕ್ಕಂಡ. ಅಕ್ಕ ತಂಗೇರಿಬ್ರೂ ಒಂದೇ ಮನ್ಯಾಗೆ ಒಂದಿಕೊಂಡು ಬಾಳೇವು ಮಾಡ್ತಾರೆ ಬಿಡು' ಅಂತ ವಿವರಣೆ ನೀಡಿದಳು ತಾಯಿ.

ಈ ಸಂಭಾಷಣೆಯಲ್ಲಿಯೂ ಕೂಡಾ 'ಮಹಾಪ್ರಾಣದ' ಬಳಕೆಯ ಬದಲಾಗಿ 'ಅಲ್ಪಪ್ರಾಣ' ಬಳಕೆಯಾಗಿದೆ.

| **ಶಿಷ್ಟ ಕನ್ನಡ** | **ಬಳ್ಳಾರಿ ಕನ್ನಡ** |
|---|---|
| ಹೊರಗಿನಿಂದ | ಒರಗಿಂತ |
| ಹೆಣ್ಣು | ಎಣ್ಣು |
| ಹೆಂಡತಿಯರನ್ನು | ಎಂಡನ್ನು |
| ಹೊಂದಿಕೊಂಡು | ಒಂದಿಕೊಂಡು |

ಶಿಷ್ಟ ಕನ್ನಡದ ಅನೇಕ ಪದಗಳು ಬಳ್ಳಾರಿಯ ಪ್ರದೇಶದಲ್ಲಿ ವಿಭಿನ್ನವಾಗಿ ರೂಪಾಂತರ ಹೊಂದಿರುವುದನ್ನು ಈ ಮೇಲಿನ 'ಗಿಡ್ಡಾಂಜನೇಯ ಸ್ವಾಮಿ' ಕಥೆಯ ಸಂಭಾಷಣೆಯ ಮೂಲಕ ಗಮನಿಸಬಹುದು.



| **ಶಿಷ್ಟ ಕನ್ನಡ** | **ಬಳ್ಳಾರಿ ಕನ್ನಡ** |
|---|---|
| ಮದುವೆ | ಮದ್ವಿ |
| ಸಂಜೆ ಮುಗಿದ ಮೇಲೆ | ಸಂಜಿ ಮುಗುದ ಮೇಲೆ |
| ಸ್ವಲ್ಪ | ಸೋಲುಪ/ಸೊಲ್ಪ |
| ತಾಯಿ ಎನ್ನುವವಳು | ತಾಯಿ ಅಂಬೋಳು |
| ಜೊತೆಯಲ್ಲಿದ್ದರೆ | ಜತೀಗಿದ್ರೆ |
| ಯಾವತ್ತಾದರೂ | ಯಾವತ್ತನ |
| ಸನಿಹಕ್ಕೆ | ಸನೇಕ |
| ದೋಚಿದ್ದೀಯಾ | ದುಡಚೀಯಾ |
| ನಮಿಸು | ಸಣದು |
| ಅವನೇನು | ಆತೇನು |

'ವಂಧ್ಯಾ', 'ವೇಷಗಳು', 'ನೆರಳು' ಕೊಂಚ ಮಟ್ಟಿಗೆ 'ಕೊನೆ' ಇವೆಲ್ಲಾ ಕಥೆಗಳನ್ನು ಬಳ್ಳಾರಿಯ ಭಾಷೆಯಲ್ಲೇ ಹೆಣೆಯಲಾಗಿದೆ. ಶಿಷ್ಟ ಕನ್ನಡ ಬಳ್ಳಾರಿಗರ ಭಾಷೆಯಲ್ಲಿ ಬೆರೆತು ಉಂಟಾಗುವ ಬೇರೊಂದು ತರಹದ ಉಚ್ಚಾರಣೆಯ ಪದಗಳನ್ನು ರವಿಯವರು ತಮ್ಮ ಕಥೆಗಳಲ್ಲಿ ತುಂಬಾ ನೈಜವಾಗಿ ಚಿತ್ರಿಸಿದ್ದಾರೆ.

ರವಿಯವರ ಕಥೆಗಳಲ್ಲಿ ಗಮನ ಸೆಳೆಯುವ ಪ್ರಮುಖ ಅಂಶವೆಂದರೆ ಇಂಗ್ಲಿಷ್ ಭಾಷೆಯ ಬಳಕೆ. ಯಥೇಚ್ಛವಾಗಿ ಇಂಗ್ಲಿಷ್ ಪದಗಳು ಅಥವಾ ವಾಕ್ಯಗಳು ಬಳಸಲ್ಪಟ್ಟಿವೆ. ಆದರೆ ರವಿಯವರು ಇಂಗ್ಲಿಷ್‌ನ್ನು ತಮ್ಮ ಕಥೆಗಳಲ್ಲಿ ಬಳಸುವಾಗ ತುಂಬಾ ಎಚ್ಚರಿಕೆ ವಹಿಸಿದ್ದಾರೆ. ಏಕೆಂದರೆ 'ವಿತಥ', 'ವಂಧ್ಯಾ', 'ಹಂತ', 'ಭ್ರೂಣ ಸಂಭಾಷಣೆ', 'ಮಿನಾರುಗಳ ಊರಿನಲ್ಲಿ ಅವರು', 'ನೆರಳು' ಈ ಕಥೆಗಳಲ್ಲೆವೂ ಇಂಗ್ಲಿಷ್‌ನಿಂದ ಮುಕ್ತವಾಗಿದೆ. ಕಥಾವಸ್ತುವಿಗೆ ಅನುಗುಣವಾಗಿ ಇಂಗ್ಲಿಷ್‌ನ್ನು ಬಳಸಿದ್ದಾರೆ. ಇದು ಅವರ ಬರವಣಿಗೆಯ ವಿಶಿಷ್ಟ ಶೈಲಿಯೂ ಹೌದು. ಪತ್ರಿಕೋದ್ಯಮದಲ್ಲಿ ಮಿಶ್ರ ಭಾಷೆಯ ಬಳಕೆಯ ಮುಖ್ಯ ಉದ್ದೇಶ ಜನರನ್ನು ನೇರವಾಗಿ ತಲುಪುವುದಾಗಿದೆ. ಹೀಗಾಗಿ ಇಂಗ್ಲಿಷ್ ಮಿಶ್ರಿತ ಪ್ರಾದೇಶಿಕ ಭಾಷೆ ಪತ್ರಿಕಾ ಬರವಣಿಗೆಯಲ್ಲಿ ಸಾಮಾನ್ಯ. ಒಟ್ಟಿನಲ್ಲಿ ಅದು ಜನರ ಮನಸ್ಸಿಗೆ ಮುಟ್ಟಬೇಕು ಎಂಬುದಾಗಿರುತ್ತದೆ. ಬಹುಶಃ ಈ ಒಂದು ಧೋರಣೆಯೇ ಮೂಲತಃ ಪತ್ರಕರ್ತರಾಗಿರುವ ರವಿ ಬೆಳಗೆರೆಯವರ ಕಥೆಗಳ ಮೇಲೂ ಇದರ ಪ್ರಭಾವ ಆಗಿರಬಹುದು.

'ಕುಹು ಕುಹರ', 'ವೇಷಗಳು', 'ಪಾ.ವೆಂ. ಹೇಳಿದ ಕಥೆ', 'ಆಕ್ರಮಣ', 'ಮಸೀದಿ ಬಿದ್ದ ಮೂರನೇ ದಿನ' ಕಥೆಗಳಲ್ಲಿ ಕೊಂಚ ಮಟ್ಟಿಗಿನ ಇಂಗ್ಲಿಷ್ ಭಾಷೆಯ ಪದಗಳು ಕಾಣಿಸಿಕೊಳ್ಳುತ್ತವೆಯಾದರೂ ಇವುಗಳಲ್ಲಿ ಇಂಗ್ಲಿಷ್‌ನ ದಟ್ಟತೆ ಕಡಿಮೆ.

'ಶಾಲಿನಿ', 'ಕೊನೆ', 'ಬದುಕೊಂದು ಸತತ ಅಭ್ಯಾಸ', 'ಹೀಗೊಬ್ಬಳು ಸೀತಾದೇವಿ', 'ದಾರಿ', 'ಬರುವನೇನೇ ಸಖಿ ಚೆಲುವ...' ಈ ಕಥೆಗಳಲ್ಲಿ ಇಂಗ್ಲಿಷ್ ಪ್ರಭಾವ ದಟ್ಟವಾಗಿದೆ.

ಉದಾ: 'ಶಾಲಿನಿ' ಕಥೆಯ ಈ ಸಂಭಾಷಣೆಯನ್ನು ನೋಡಬಹುದು.

"ರಾತ್ರಿ ಪಕ್ಕಕ್ಕೆ ಮಲಗಿ ಬಿಕ್ಕಿದ ಶಾಲಿನಿಗೆ 'I am sorry' ನಾಚಿಕೆಯಿಂದ ಹೇಳಿದ್ದೆ. atleast let me adjust...' ಬಿಕ್ಕುತ್ತಲೇ ಹೇಳಿದ ಶಾಲಿನಿಗೆ 'only you can under stand and adjust' ಎಂದು ಹೇಳಿದೆ" ಈ ಕಥೆಯಲ್ಲಿ ಇನ್ನು ಹೆಚ್ಚಿನ ಇಂಗ್ಲಿಷ್ ಪದಗಳ ಬಳಕೆ ಕಂಡುಬರುತ್ತದೆ. resistance, inspire, intrest, teste, expect, free, exam, fix, eccentric ಮುಂತಾದ ಪದಗಳು ಕಥೆಯುದ್ದಕ್ಕೂ ಬಳಕೆಯಾಗಿವೆ. ಈ ಪದಗಳು ಕಥೆಯಲ್ಲಿ ಮೂಲ ಇಂಗ್ಲಿಷ್ ಲಿಪಿಯಲ್ಲೇ ಬಳಕೆಯಾಗಿವೆ. ಈ ಪದಗಳಿಗೆ ಪರ್ಯಾಯವಾಗಿ ಕನ್ನಡ ಪದಗಳನ್ನೇ ಬಳಸಬಹುದಾದ ಸಾಧ್ಯತೆಗಳಿದ್ದರೂ ಆ ಪ್ರಯತ್ನವನ್ನು ರವಿಯವರು ಮಾಡಿಲ್ಲ. ಈ ಇಂಗ್ಲಿಷ್ ಪದಗಳಿಗೆ ಪರ್ಯಾಯವಾಗಿ ಕನ್ನಡದಲ್ಲಿ ಹೀಗೆ ಪದಗಳನ್ನು ಸೂಚಿಸಬಹುದು.

| ಇಂಗ್ಲಿಷ್ | ಕನ್ನಡ |
|---|---|
| Resistance | ನಿರ್ಬಂಧನೆ |
| Inspire | ಪ್ರಭಾವಿತ |
| Taste | ಅಭಿರುಚಿ |
| Expect | ನಿರೀಕ್ಷೆ |
| Free | ಬಿಡುವು |
| Exam | ಪರೀಕ್ಷೆ |
| Fix | ನಿಶ್ಚಯ |
| Eccentric | ವಿಪರೀತ |

'ಕೊನೆ' ಕಥೆಯಲ್ಲಿಯೂ ಕೂಡಾ ಇಂಗ್ಲಿಷ್ ವ್ಯಾಪಕವಾಗಿ ಬಳಸಲಾಗಿದೆ.

ಉದಾ: ೧. ರವಿ ಬೆಳಗೆರೆ ಹಾಗೂ ಜೋಸೆಫೀನ್ ನಡುವಿನ ಸಂಭಾಷಣೆಯನ್ನು ಗಮನಿಸಬಹುದು.

"ವಿಲ್ ಯು ಪ್ಲೀಸ್ ಕಾಲ್ ಮಿಸ್ ಜೋಸೆಫೀನ್?"

ಅಂದು ಬಿಟ್ಟೆ

"ಸ್ಪೀಕಿಂಗ್!" ಅಂದಳು.

"ನಾನು ಬೆಳಗೆರೆ... ಇವತ್ತು ರಾತ್ರಿ ನನ್ನ ಮನೇಲಿ ಒಂದು ಪಾರ್ಟಿ ಇಟ್ಕೊಂಡಿದೀನಿ. ನನ್ನ ರೈಟರ್ ಫ್ರೆಂಡ್ ಬಂದಿದ್ದಾರೆ. ಅಶೋಕ್ ಅಂತ. ಗುಡ್‌ಪೊಯಟ್, ನೀವು ನಮ್ಜೊತೆ ಜಾಯಿನ್ ಆದ್ರೆ ತುಂಬ ಸಂತೋಷವಾಗುತ್ತೆ..." ಎಷ್ಟೊಂದು ನಿರರ್ಗಳವಾಗಿ, ಧೈರ್ಯವಾಗಿ ಮಾತಾಡಿ ಬಿಟ್ಟೆ ಅಂದ್ರೆ...

"ಓಹ್ ಸರ್ಟನ್ಲಿ ಮಿ. ಗೆರೆ. ಖಂಡಿತಾ ಬರ್‍ತೀನಿ.

ಊಟಕ್ಕೇನು ಮಾಡ್ತೀರಿ? ಬೇಕಾದ್ರೆ ನನ್ನ ಮನೇಲಿ ಅಡುಗೆ ಮಾಡಿಕೊಂಡು ಬರ್‍ತೀನಿ. ಲೆಟ್ಸ್ ಹ್ಯಾವ್ ಎ ನೈಸ್ ಟೈಂ..." ಅಂದಳು ಜೋಸೆಫೀನ್.

೨. "ಮಿ. ಗೆರೆ... ವಿಲ್ ಯು ಆಸ್ಕ್ ಯುವರ್ ಗೆಸ್ಟ್ ಟು ಬಿಹೇವ್..." ಅನ್ನುವಷ್ಟರಲ್ಲಿ ಜೋಸೆಫೀನಳ ಕೊರಳ ಸೆರೆಯುಬ್ಬಿ ಬಂದಿದ್ದವು.

೩. "ನಿಮ್ಮನೇಲಿ ಮಿರ್ಜಾ ಗಾಲಿಬನ ಗಜಲಗಳ ಒಳ್ಳೆ ಕಲೆಕ್ಷನ್ನಿದೆ. ಐ ಲವ್ ಟು ಲಿಸನ್" ಅಂದವಳೇ ಗಜಲಿನ ಮೊರೆತಲ್ಲೆ ಕಿವಿದೆರೆದಳು.

ಹೀಗೆ ಕಥೆಯುದ್ದಕ್ಕೂ ಇಂಗ್ಲಿಷ್ ವಾಕ್ಯಗಳು, ಪದಗಳು ಈ ಕಥೆಯಲ್ಲಿ ಕಂಡುಬರುತ್ತದೆ. ಆಧುನೀಕತೆಯನ್ನೊಳಗೊಂಡ, ನಗರ ಪ್ರದೇಶದಲ್ಲಿ ನಡೆಯುವ ಪ್ರೇಮಕಥೆ ಇದಾಗಿರುವುದರಿಂದ ಈ ಕಥೆಯಲ್ಲಿ ಇಂಗ್ಲಿಷ್ ಸಹಜತೆಯನ್ನು ಪಡೆದುಕೊಂಡಿದೆ. ಈ ಕಥೆಯ ಅಜಯಕುಮಾರ್ ಪಾಟೀಲನ ಪಾತ್ರದ ಮೂಲಕ ಬಳ್ಳಾರಿಯ ಭಾಷೆಯೂ ಕೂಡಾ ಇಲ್ಲಿ ಬಳಕೆಯಾಗಿದೆ.

'ಹೀಗೊಬ್ಬಳು ಸೀತಾದೇವಿ' ಕಥೆ ಕಾಲೇಜು ಕ್ಯಾಂಪಸ್ಸಿನ ಹುಡುಗಿಯೊಬ್ಬಳ ಪ್ರೇಮದ ಪರಿಯನ್ನು ನಿರೂಪಿಸುವ ಕಥೆಯಾಗಿರುವುದರಿಂದ ಇಲ್ಲಿಯೂ ಇಂಗ್ಲಿಷ್ ಭಾಷೆ ಯಥೇಚ್ಛವಾಗಿ ಬಳಕೆಯಾಗಿದೆ.

ಉದಾ: ೧. "ಅಪರ್ಣಾ... ವಾಟ್ಸ್ ರಾಂಗ್ ವಿಥ್ ಯೂ?"

ಎಂದು ಹೌಹಾರಿದವಳೇ ನನ್ನ ಬಗ್ಗೆ ಅವಳು ವಹಿಸತೊಡಗಿದ ಕಾಳಜಿ ಕಂಡು ಆ ಜ್ವರದಲ್ಲೂ ನಗೆಯುಕ್ಕಿತು.

೨. "ಹಿ ಈಸ್ ಎ ಟಿಪಿಡ್ ರ್‍ಯಾಸ್ಕೆಲ್, ಅಪರ್ಣಾ ಧೈರ್ಯವಿಲ್ಲದೋರು ಪ್ರೀತಿಸಬಾರ್‍ದು ಕಣೇ!"

೩. "ವಾಟ್ ಈಸ್ ಗ್ರೇಟ್ ಅಬೌಟ್ ಇಟ್?" ಅಂದವಳೇ ಅನ್ನದ ತಪ್ಪಲೆಯನ್ನು ರಪ್ಪನೆ ಇಳಿಸಿದಳು.

'ಬರುವನೇನೇ ಸಖಿ ಚೆಲುವ...' ಕಥೆ ಕೂಡಾ ಕಾಲೇಜು ಕ್ಯಾಂಪಸ್ಸಿನಲ್ಲಿ ನಡೆಯುವ

ಪ್ರೇಮಕಥೆಯಾಗಿರುವುದರಿಂದ ಇದರಲ್ಲಿಯೂ ಕೂಡಾ ಇಂಗ್ಲಿಷ್ ಭಾಷೆಯ ಬಳಕೆ ಸಹಜವಾಗಿಯೇ ಮೂಡಿಬಂದಿದೆ. ತೀರಾ ಇತ್ತೀಚಿಗೆ ಬರೆದ ಕಥೆ ಇದಾಗಿರುವುದರಿಂದ ಈ ಕಥೆಯಲ್ಲಿ ಬೇರೆ ಯಾವ ಕಥೆಗಳಲ್ಲೂ ಕಂಡು ಬರದಂತಹ ಕೆಲವು ಆಧುನಿಕವಾದ ವಿಶಿಷ್ಟ ಪದಗಳ ಬಳಕೆ ಈ ಕಥೆಯಲ್ಲಿ ಬಳಸಲಾಗಿದೆ.

ಉದಾ: ಮೊಬೈಲ್, ಸಿಮ್ ಕಾರ್ಡ, ಛಾರ್ಜ್, ಮೊಬೈಲ್ ಫೋನ್ ಸಿಗ್ನಲ್ ಮುಂತಾದ ಹೊಸ ಪದಗಳು ಈ ಕಥೆಯಲ್ಲಿ ಕಂಡುಬರುತ್ತವೆ.

'ಬದುಕೊಂದು ಸತತ ಅಭ್ಯಾಸ', 'ದಾರಿ' ಕಥೆಗಳೂ ಕೂಡಾ ಇಂಗ್ಲಿಷ್‌ನಿಂದ ಮುಕ್ತವಾಗಿಲ್ಲ. ಈ ಕಥೆಗಳಲ್ಲಿ ಪ್ರಾರಂಭದಿಂದ ಅಂತ್ಯದವರೆಗೆ ಇಂಗ್ಲಿಷ್ ಪದಗಳು ಕಾಣಿಸಿಕೊಳ್ಳುತ್ತವೆ.

ಭಾಷೆಯ ದೃಷ್ಟಿಯಿಂದ 'ಕತ್ತಲೆ ನೋವು ಮತ್ತು ಹೆಣ' ಕಥೆ ಉಳಿದೆಲ್ಲ ಕಥೆಗಳಿಗಿಂತಲೂ ವಿಭಿನ್ನವಾಗಿದೆ. ಈ ಕಥೆಯಲ್ಲಿ ಬಳ್ಳಾರಿ ಕನ್ನಡದ ಜೊತೆಯಲ್ಲಿ ಹಿಂದಿ, ಇಂಗ್ಲಿಷ್ ಭಾಷೆಯೂ ಬಳಕೆಯಾಗಿದೆ. ಈ ಕಥೆ ಘಟಿಸುವುದು ಬಳ್ಳಾರಿ ನಗರದಲ್ಲೇ ಆಗಿದ್ದರಿಂದ ಬಳ್ಳಾರಿ ಕನ್ನಡವನ್ನು ಬಳಸಲಾಗಿದೆ. ಕಥಾವಸ್ತು ಕೂಡಾ ಬಡ ಮುಸ್ಲಿಂ ಪೇದೆಯೊಬ್ಬನ ಕುಟುಂಬದ ತಲ್ಲಣಗಳನ್ನು ಚಿತ್ರಿಸುವುದಾಗಿರುವುದರಿಂದ ಹಿಂದಿ ಭಾಷೆ ಇಲ್ಲಿ ಬಳಕೆಯಾಗಿದೆ. ರವಿಯವರ ಬಹುತೇಕ ಕಥೆಗಳಲ್ಲಿರುವಂತೆ ಈ ಕಥೆಯಲ್ಲಿಯೂ ಕೂಡಾ ಇಂಗ್ಲಿಷ್ ಭಾಷೆ ವ್ಯಾಪಕವಾಗಿ ಬಳಸಲಾಗಿದೆ. ಈ ಕಥೆಯಲ್ಲಿ ಬಳಸಲಾದ ಭಾಷೆಯ ವೈವಿಧ್ಯತೆಯನ್ನು ಈ ಕೆಳಗಿನಂತೆ ಗುರುತಿಸಬಹುದು.

೧. ಕಥಾನಾಯಕ ಹುಸೇನಿಗೆ ಅವನ ಹೆಂಡತಿ ಫಾತೀಮಾ ಬೈಯ್ಯುವ ಮಾತುಗಳಲ್ಲಿ ಬಳ್ಳಾರಿ ಭಾಷೆ ಅಭಿವ್ಯಕ್ತಗೊಂಡಿದೆ.

"ಕಳ್ ಸೂಳೇ ಮಗ್ನೆ... ನೀನು ದುಡಿಯಾದು ನಿನ್ ಬೀಡಿಗೆ ಸೈತ ಸಾಲಾದಿಲ್ಲ. ಜೋರು ಮಾಡ್ತೀಯೇನು? ನನ್ ಮಗಳು ಯಾರ್ತಾಗನ್ನ ಓಗ್ತಾಳೆ. ನೀನೇನು ದುಡ್ಡು ಕೊಟ್ಟೀಯಾ ಸಿನಿಮಾ ನೋಡಾಕೆ? ಕೂಳು ಹಾಕಾಕೆ ಸಾಯ್ತೀ? ಎಂಡ್ರು ಮಕ್ಕಳ್ನ ಒದಿತೀಯೇನು?" ಫಾತೀಮಾ ಕೀರಲು ದನಿಯಲ್ಲಿ ಚೀರುತ್ತಾಳೆ.

೨. ಹುಸೇನಿ ಹಾಗೂ ಅವನ ಕೊನೆಯ ಮಗ ಜಾಕೀರ್ ನಡುವಿನ ಸಂಭಾಷಣೆಯಲ್ಲಿ ಹಿಂದಿ ಭಾಷೆ ಬಳಕೆಯಾಗಿದೆ.

'ಕ್ಯಾರೆ ಆಯಾ?

'ಫಿರೂ ಅಮ್ಮ ಬೋಲಿ...ಫಿರೂ ಶ್ಯಾಮ್ಕು ಚಾವಲ್ ಲಾನಾಕತೆ' ಮೂಗಿನಲ್ಲಿ ಸೋರುವುದನ್ನು ಹಾಗೂ ಜಾರುವ ಚಡ್ಡಿಯನ್ನು ಆಗಾಗ ಮೇಲಕ್ಕೆಳೆದುಕೊಳ್ಳುತ್ತಾ ಪಾಠ ಒಪ್ಪಿಸುತ್ತಾನೆ ಹುಸೇನಿಯ ಕೊನೆಯ ಸಂತಾನ ಜಾಕೀರ್.

'ಬಾಬಾ...' ಪ್ರಾರಂಭಿಸುತ್ತಾನೆ.

'ಕ್ಯಾರೇ?'

'ದಸ್ ಪೈಸೆ!' ಹುಸೇನಿಗೆ ರೇಗಿ ಹೋಗುತ್ತದೆ.

ಮೇಲೆದ್ದವನೇ 'ಜಾತಾಕಿ ನೈ ಛಿನಾಲ್ಕೆ... ಚಪ್ಪಲ್ಲೇಕು...' ಮಾತು ಮುಗಿಯುವ ಮೊದಲೇ ಹುಡುಗ ಬೀಳಬಹುದಾದ ಹೊಡೆತ ಊಹಿಸಿಕೊಂಡು ಓಡಿಬಿಡುತ್ತಾನೆ.

೩. ಕಥಾನಾಯಕ ಹುಸೇನಿಯ ಸಂಭಾಷಣೆಯಲ್ಲಿ ಇಂಗ್ಲಿಷ್ ಬಳಕೆಯಾಗಿದೆ.

'ಮೈ ಡಾಟರ್ ಡೂಯಿಂಗ್ ಪ್ರಾಸ್! ಡೂಯಿಂಗ್...'

ಮೈಯೆಲ್ಲಾ ದಣಿದು ನಿದ್ದೆಗೆ ಜಾರುವ ತನಕ ಗೊಣಗುತ್ತಲೇ ಇರುತ್ತಾನೆ ಹುಸೇನಿ.

ಕಥೆಯ ನಿರೂಪಣೆಯಲ್ಲಿಯೂ ಕೂಡಾ 'ಕ್ವಾರ್ಟರ್ಸ್‌, ರಿಟೈರ್, ಪೆನ್ಶನ್, ಗ್ರಾಚ್ಯುಟಿ, ಕಂಡೆಮ್, ರೇನ್‌ಕೋಟ್, ಸರ್ವಿಸ್ ಮುಂತಾದ ಅನೇಕ ಇಂಗ್ಲಿಷ್ ಪದಗಳು ಬಳಕೆಯಾಗಿವೆ.

ಭಾಷಿಕವಾಗಿ ಬಳ್ಳಾರಿ ಪ್ರದೇಶದಲ್ಲಿ ತೆಲುಗು ಭಾಷೆಯ ಪ್ರಭಾವ ತುಂಬಾ ಇದ್ದರೂ ರವಿಯವರ ಕಥೆಗಳಲ್ಲಿ ತೆಲುಗು ಭಾಷೆಯ ಪದಗಳು ತುಂಬಾ ವಿರಳವಾಗಿ ಕಂಡುಬರುತ್ತವೆ.

೧. **ವೆನ್ನೆಲ:** 'ಮಿನಾರುಗಳ ಊರಿನಲ್ಲಿ ಅವರು' ಕಥೆಯಲ್ಲಿ ಬಳಕೆಯಾದ ಈ ಪದ ತೆಲುಗಿನದ್ದು. ಕನ್ನಡದಲ್ಲಿ ಇದರರ್ಥ 'ಬೆಳದಿಂಗಳು'.

೨. **ದಿಮ್ಮನಸೆ:** 'ಗಿಡ್ಡಾಂಜನೇಯ ಸ್ವಾಮಿ' ಕಥೆಯಲ್ಲಿ ಬಳಸಲಾಗಿರುವ ಈ ಪದವೂ ತೆಲುಗಿನದ್ದಾಗಿದ್ದು, ಕನ್ನಡದಲ್ಲಿ ಇದರರ್ಥ 'ಗರ್ಭಿಣಿ'.

೩. **ಕಮ್ಮಗೆ:** 'ಬರುವನೇನೇ ಸಖಿ ಚೆಲುವ...' ಕಥೆಯಲ್ಲಿ ಬಳಕೆಯಾದ ತೆಲುಗು ಪದವಿದು. ಕನ್ನಡದಲ್ಲಿ ಈ ಪದಕ್ಕೆ 'ಚೆನ್ನಾಗಿ', 'ಹದವಾದ' ಎಂಬ ಅರ್ಥಗಳಿವೆ.

೪. **ಕುನ್ನೆಮ್ಮ:** 'ಭ್ರೂಣ ಸಂಭಾಷಣೆ' ಹಾಗೂ 'ವಂಧ್ಯಾ' ಕಥೆಯಲ್ಲಿ ಬಳಕೆಯಾಗಿರುವ ಈ ಪದ ಪೂರ್ತಿಯಾಗಿ ತೆಲುಗಿನದೂ ಅಲ್ಲದ, ಕನ್ನಡದೂ ಅಲ್ಲದ ಬಳ್ಳಾರಿ ಪ್ರದೇಶದ ಜನರು ಮಾತ್ರ ಬಳಸುವ ಪದವಾಗಿದೆ. ಶಿಷ್ಟ ಕನ್ನಡದಲ್ಲಿ ಈ ಪದಕ್ಕೆ 'ಮುದ್ದಾದ' 'ಮುದ್ದಾಗಿರುವ' ಎಂಬ ಅರ್ಥಗಳಿವೆ.

ರವಿಯವರ ಒಟ್ಟು ಕಥೆಗಳಲ್ಲಿ ಕಂಡುಬರುವ ತೆಲುಗು ಪದಗಳು ಇವಿಷ್ಟೇ.

ಕಥೆಗಳಲ್ಲಿನ ಪಾತ್ರಗಳ ಸಂಭಾಷಣೆಯಲ್ಲಿ ಭಾಷೆಯ ವೈವಿಧ್ಯತೆ ಕಂಡುಬಂದರೂ, ಕಥೆಯ ನಿರೂಪಣೆಯಲ್ಲಿ ಬಳಕೆಯಾಗಿರುವುದು ಶಿಷ್ಟ ಕನ್ನಡವೇ. ಹೀಗೆ ರವಿ ಬೆಳಗೆರೆಯವರು ತಮ್ಮ ಒಟ್ಟು ಕಥೆಗಳಲ್ಲಿ ಬಳಸಿರುವ ವೈವಿಧ್ಯಮಯ ಭಾಷೆಯ ಬಗ್ಗೆ ವಿಶ್ಲೇಷಣೆ ಮಾಡಬಹುದು.

'ಅನುಭವವನ್ನು ಭಾಷೆಯಲ್ಲಿ ಮೂರ್ತಗೊಳಿಸುವುದೇ ಸಾಹಿತ್ಯದ ಕೆಲಸ; ಅದು ತುಂಬಾ ಜವಾಬ್ದಾರಿಯ ಕೆಲಸ ಕೂಡಾ. ಪ್ರತಿಯೊಬ್ಬ ಕಥೆಗಾರನೂ ತನ್ನದೇ ಆದ ವಿಶಿಷ್ಟ

ಹಿನ್ನೆಲೆ, ಸಂಸ್ಕಾರ, ಅನುಭವಗಳನ್ನು ಹೊಂದಿದವನಾದ್ದರಿಂದ ತನ್ನ ಕಥೆಗಳಲ್ಲಿ ಬಳಸುವ ವಸ್ತು-ಭಾಷೆಗೆ ಸಂಬಂಧಿಸಿದಂತೆ ಅವನು ತೋರುವ ಸಂವೇದನೆ ಇತರರಿಗಿಂತ ಭಿನ್ನವಾಗಿರುತ್ತದೆ.'[೧೦] ಈ ಹಿನ್ನೆಲೆಯಲ್ಲಿ ರವಿ ಬೆಳಗೆರೆಯವರ ಕಥೆಗಳಲ್ಲಿಯೂ ಕೂಡಾ ಇದನ್ನು ಕಾಣಬಹುದು.

## ಕೊನೆ ಟಿಪ್ಪಣಿ


೧. ಭೈರಪ್ಪ. ಎಸ್.ಎಲ್, ಕಥೆ ಮತ್ತು ಕಥಾವಸ್ತು, ಸಾಹಿತ್ಯ ಭಂಡಾರ, ಬೆಂಗಳೂರು, ೨೦೦೭, ಪುಟ: ೯೯

೨. ಶೇಷಗಿರಿರಾವ್. ಎಸ್.ಎಲ್, ಸಾಹಿತ್ಯ, ಸಪ್ನ ಬುಕ್‌ಹೌಸ್, ಬೆಂಗಳೂರು, ೧೯೯೯, ಪುಟ: ೧೨೫

೩. ರವಿ ಬೆಳಗೆರೆ, ದಾರಿ, ಪ್ರದೀಪ ಪ್ರಕಾಶನ, ಬಳ್ಳಾರಿ, ೧೯೮೦ (ಮುನ್ನುಡಿ)

೪. ಅದೇ ಕೃತಿ (ಮುನ್ನುಡಿ)

೫. ರವಿ ಬೆಳಗೆರೆ, ಪಾ.ವೆಂ. ಹೇಳಿದ ಕಥೆ, ಅಭಿನವ ಪ್ರಕಾಶನ, ಬೆಂಗಳೂರು, ೧೯೯೫ (ಮುನ್ನುಡಿ)

೬. ಅದೇ ಕೃತಿ, ಪುಟ: ೩೯

೭. 'ಹಾಯ್ ಬೆಂಗಳೂರ್!' ವಾರ ಪತ್ರಿಕೆ (ಸೃಷ್ಟಿ-೭೬೯) ಜುಲೈ ೧೫, ೨೦೧೦

೮. ಮೊಗಳ್ಳಿ ಗಣೇಶ, ಸಣ್ಣಕಥೆಗಳು, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫, ಪುಟ: ೦೫

೯. ಪ್ರಸಾದ್‌ಸ್ವಾಮಿ.ಎಸ್, ಕಥೆ-ಕಥನ, ಧಾತ್ರಿ ಪುಸ್ತಕ, ಬೆಂಗಳೂರು, ೨೦೦೭, ಪುಟ: ೨೪೦

೧೦. ಅದೇ ಕೃತಿ, ಪುಟ: ೨೪೪




## ಅಧ್ಯಾಯ ೪

# ರವಿ ಬೆಳಗೆರೆಯವರ ಕಥೆಗಳ ಪಾತ್ರ ಚಿತ್ರಣ

ಕಥೆ ಅಥವಾ ಕಾದಂಬರಿಯಲ್ಲಿ ಪಾತ್ರಗಳು ಪ್ರಮುಖ ಪಾತ್ರ ವಹಿಸುತ್ತವೆ. ಉದಾತ್ತ ಪಾತ್ರಗಳೇ ಇರಲಿ, ವಿಕೃತ ಪಾತ್ರಗಳೇ ಇರಲಿ ಅವುಗಳ ಪರಿಣಾಮಕಾರಿ ಚಿತ್ರಣ ಲೇಖಕರ ಬರವಣಿಗೆಯ ಕೌಶಲ್ಯವನ್ನವಲಂಬಿಸಿದೆ. ರವಿ ಬೆಳಗೆರೆಯವರ ಕಥೆಗಳಲ್ಲಿ ಪಾತ್ರಗಳು ವೈವಿಧ್ಯಮಯವಾಗಿ ಮೂಡಿಬಂದಿವೆ. 'ಹೆಣದ ಮನೆಯಲ್ಲಿ', 'ಮೈಕು', 'ಕುಹು ಕುಹರ'ದಂತಹ ಕೆಲವು ಕಥೆಗಳನ್ನು ಹೊರತುಪಡಿಸಿದರೆ ಬಹುತೇಕ ಕಥೆಗಳಲ್ಲಿ ಪುರುಷ ಪಾತ್ರಗಳಿಗಿಂತ ಸ್ತ್ರೀ ಪಾತ್ರಗಳೇ ಹೆಚ್ಚು ಪರಿಣಾಮಕಾರಿಯಾಗಿ ಮೂಡಿ ಬಂದಿವೆ. 'ಶಾಲಿನಿ' ಕಥೆಯ ಶಾಲಿನಿ, 'ಪಾ.ವೆಂ. ಹೇಳಿದ ಕಥೆ'ಯ ಅಂಬುಜಾ, 'ವಿತಥ' ಕಥೆಯ ಅನುಸೂಯ, 'ವೇಷಗಳು' ಕಥೆಯ ಶಿವಿ ಮುಂತಾದ ಸ್ತ್ರೀ ಪಾತ್ರಗಳು ಓದುಗರ ಮನಸ್ಸಿನಿಂದ ಮರೆಯಾಗುವುದಿಲ್ಲ. ಹೆಂಗಸಿನ ಮಾನಸಿಕ ತೊಳಲಾಟಗಳು, ತುಮುಲಗಳು ಇವುಗಳನ್ನೆಲ್ಲಾ ಈ ಪಾತ್ರಗಳ ಮೂಲಕ ಯಶಸ್ವಿಯಾಗಿ ರವಿಯವರು ಅಭಿವ್ಯಕ್ತಿಸಿದ್ದಾರೆ.

ಪುರುಷ ಪಾತ್ರ ಚಿತ್ರಣದಲ್ಲಿಯೂ ರವಿಯವರು ತಮ್ಮ ಕೈಚಳಕ ತೋರಿದ್ದಾರೆ. 'ಕತ್ತಲೆ, ನೋವು ಮತ್ತು ಹೆಣ' ಕಥೆಯ ಲಕಡೀ ಜಮ್ದಾರ ಹುಸೇನ್‌ಸಾಬ, 'ಮೈಕು' ಕಥೆಯ ವೀರಸಂಗಪ್ಪ ನಾಗಪ್ಪ ಹೂಗಾರ, 'ಹೆಣದ ಮನೆಯಲ್ಲಿ' ಕಥೆಯ ನಾರಾಣಿ, 'ಗಿಡ್ಡಾಂಜನೇಯ ಸ್ವಾಮಿ' ಕಥೆಯ ಬಾಲಾಂಜಿ ಈ ಪಾತ್ರಗಳು ಬೆಳಗೆರೆಯವರ ಪಾತ್ರ ಸೃಷ್ಟಿಯ ಕುಶಲತೆಗೆ ಸಾಕ್ಷಿಯಾಗಿವೆ. ಅಂತರ್ಮುಖಿಯತೆ, ನಿರೀಂದ್ರಿಯತೆ, ಬದುಕಿನ ರಿಕ್ತತೆ ಇಂತಹ ವಸ್ತುಗಳೇ ಪಾತ್ರಗಳಾಗಿ ಸೃಷ್ಟಿಯಾದಾಗ ಹೇಗಿರಬಹುದು ಎಂಬುವುದಕ್ಕೆ 'ಪರಿಚಯ' ಕಥೆಯ ಕಥೆಗಾರ ಶ್ರೀವತ್ಸ, 'ಕುಹು ಕುಹರ' ಕಥೆಯ ಕಲಾವಿದ, 'ವಿತಥ' ಕಥೆಯ ಅಚ್ಚಿ, 'ಆಕ್ರಮಣ' ಕಥೆಯ ಕಥಾನಾಯಕರನ್ನು ನೋಡಬಹುದು. ಈ ಕಥೆಯ ಪಾತ್ರಗಳು ಕಥೆಯನ್ನು ಮೀರಿ ಬೆಳೆದು ಬಿಟ್ಟಿವೆ ಎಂಬುದು ಕಥೆಗಳನ್ನು ಓದಿದಾಗ ವಿದಿತವಾಗುತ್ತದೆ.

ಅಧೋ ಲೋಕದ ವಿಚಿತ್ರ ಬದುಕಿನ ಕಥೆ ವ್ಯಥೆಯನ್ನು 'ಹಂತ' ಕಥೆಯ ಪಾತ್ರಗಳ ಮೂಲಕ ಕಟ್ಟಿಕೊಟ್ಟಿದ್ದಾರೆ. ರೇಣುಕಮ್ಮ, ಯಲ್ಲವ್ವ, ಫಕೀರಪ್ಪ, ಗೂಳೆಪ್ಪ, ಯಂಕಟಪ್ಪ ಈ ಪಾತ್ರಗಳ ಮೂಲಕ ಜೋಗಪ್ಪ-ಜೋಗತಿಯರ ವಿಕ್ಷಿಪ್ತ ಬದುಕಿನ ನಿಗೂಢತೆಯನ್ನು ಅನಾವರಣಗೊಳಿಸಿದ್ದಾರೆ. 'ವೇಷಗಳು' ಕಥೆಯ ಬಸಪ್ಪನನ್ನು ಈ ಗುಂಪಿಗೆ ಸೇರಿಸಬಹುದು. ಪ್ರೇಮದ ನವಿರು ಭಾವನೆಗಳನ್ನು 'ಮಿನಾರುಗಳ ಊರಿನಲ್ಲಿ ಅವರು' ಕಥೆಯ ಪ್ರೇಮಿಗಳು, 'ಕೊನೆ' ಕಥೆಯ ರವಿ ಬೆಳಗೆರೆ ಪಾತ್ರಗಳ ಮೂಲಕ ವ್ಯಕ್ತಗೊಳಿಸಿದ್ದಾರೆ. 'ಮಸೀದಿ ಬಿದ್ದ ಮೂರನೇ ದಿನ' ಕಥೆಯ ಗುರುಸಾಂತ ಹಾಗೂ ಅತ್ತಾರ್‌ಸಾಬು ಪಾತ್ರಗಳ ಮೂಲಕ ಹಿಂದೂ-ಮುಸ್ಲಿಂ ಅನೋನ್ಯತೆಯನ್ನು ರವಿಯವರು ಚಿತ್ರಿಸಿದ್ದಾರೆ. 'ವೇಷಗಳು' ಕಥೆಯ ಬುದ್ಧಿಮಾಂದ್ಯ, ಕೋತಿಯನ್ನು ಹೋಲುವ, ಮಂಗೋಲಾಯ್ಡ್ ಮಗು ಅಂಜಪ್ಪನ ಪಾತ್ರ ರವಿಯವರು ಸೃಷ್ಟಿಸಿದ ಪಾತ್ರಗಳಲ್ಲೇ ತುಂಬಾ ಪರಿಣಾಮಕಾರಿಯಾದದ್ದು ಹಾಗೂ ಮನಸ್ಸು ಕಲಕುವಂಥದ್ದು. 'ಭ್ರೂಣ ಸಂಭಾಷಣೆ' ಕಥೆಯಲ್ಲಿ ಗಂಡೂ ಅಲ್ಲದ, ಹೆಣ್ಣೂ ಅಲ್ಲದ 'ಭ್ರೂಣ' ಕೂಡಾ ರವಿಯವರ ಕೈಯಲ್ಲಿ ಪಾತ್ರವಾಗಿ ಅರಳಿದೆ. ಬಹುಶಃ ಇದು ರವಿಯವರ ಸೃಜನಶೀಲತೆಯ ಉತ್ತುಂಗವೆಂದೇ ಹೇಳಬಹುದು. ಹೀಗೆ ರವಿಯವರು ತಮ್ಮ ಕಥೆಗಳಲ್ಲಿ ವೈವಿಧ್ಯಮಯವಾಗಿ ಪಾತ್ರಗಳನ್ನು ಚಿತ್ರಿಸಿದ್ದಾರೆ.

ರವಿಯವರ ಕೆಲವು ಕಥೆಗಳಲ್ಲಿ ತುಂಬಾ ನೀರಸವಾದ ಪಾತ್ರಗಳೂ ಸೃಷ್ಟಿಯಾಗಿವೆ. 'ಬದುಕೊಂದು ಸತತ ಅಭ್ಯಾಸ' ಕಥೆಯ ಸುಷ್ಮಾ, 'ಹೀಗೊಬ್ಬಳು ಸೀತಾದೇವಿ' ಕಥೆಯ ಸೀತಾದೇವಿ, ಅವಿನಾಶ್ ರೆಡ್ಡಿ, 'ಸತ್ಯಭಾಮೆಯ ತೆಕ್ಕೆಯಿಂದ' ಕಥೆಯ ಕಥಾನಾಯಕ, ಹಾಗೂ ಅವನ ಪ್ರೇಯಸಿ, 'ಬರುವವನೇನೇ ಸಖಿ ಚೆಲುವ...' ಕಥೆಯ ಕಥಾನಾಯಕಿ ಹಾಗೂ ಅವಳ ಪ್ರಿಯತಮ ಮುಕುಂದ ಈ ಎಲ್ಲಾ ಪಾತ್ರಗಳು ತುಂಬಾ ಪೇಲವವಾಗಿ ಮೂಡಿಬಂದಿವೆ. ಆದರೆ ಉಳಿದ ಕಥೆಗಳ ವೈವಿಧ್ಯಮಯ ಪರಿಣಾಮಕಾರಿಯಾಗಿ ಪಾತ್ರಗಳ ಮುಂದೆ ಈ ಪಾತ್ರಗಳು ಗೌಣವಾಗುತ್ತವೆ.

ರವಿ ಬೆಳಗೆರೆಯವರ ಒಟ್ಟು ಕಥೆಗಳಲ್ಲಿನ ಪಾತ್ರ ಚಿತ್ರಣವನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದು.

'ಶಾಲಿನಿ' ಕಥೆಯ ನಿರೂಪಕ ಶಾಲಿನಿಯ ಗಂಡ ಆಗಿದ್ದರೂ, ಪಾತ್ರದ ದೃಷ್ಟಿಯಿಂದ ಅವನ ಪಾತ್ರ ಈ ಕಥೆಯಲ್ಲಿ ಗೌಣವಾಗಿದೆ. ಈ ಕಥೆಯಲ್ಲಿ **'ಶಾಲಿನಿ'** ಪಾತ್ರವೇ ಹೈಲೈಟ್ ಆಗಿ ಮೂಡಿದೆ. ಅಂತೆಯೇ ಕಥೆಯ ಶೀರ್ಷಿಕೆ ಕೂಡಾ ಅದೇ ಆಗಿದೆ. ಶಾಲಿನಿ ಭಾವುಕ ಸ್ವಭಾವದವಳು. ಪ್ರೀತಿಸಿ ಮದುವೆಯಾದ ಶಾಲಿನಿಯ ಗಂಡನಿಗೆ ಕ್ರಮೇಣ ಅವಳಲ್ಲಿ ಆಸಕ್ತಿ ಕಳೆದುಕೊಳ್ಳುತ್ತಾನೆ. ಪಕ್ಕದ ಮನೆ ಹುಡುಗಿ ಕುಮುದಾಳಲ್ಲಿ ಆಸಕ್ತಿ ಬೆಳೆಸಿಕೊಳ್ಳುತ್ತಾನೆ. ಇದನ್ನೇ ತನ್ನ ಡೈರಿಯಲ್ಲಿ ಬರೆಯುತ್ತಾನೆ. ಡೈರಿಯನ್ನೋದಿದ ಶಾಲಿನಿ ತನ್ನ ಭಾವೋದ್ವೇಗಗಳನ್ನು ತೋರ್ಪಡಿಸದೇ 'ತನ್ನನ್ನು ಯಾವಾಗಲಾದರೂ ತೊರೆದು ಹೋಗಬಹುದು. ಆದರೆ ನನಗೀಗ

ಮೂರು ತಿಂಗಳು' ಎಂದು ತನ್ನ ಗಂಡನಿಗೆ ಪತ್ರ ಬರೆದು ಅದೇ ಡೈರಿಯಲ್ಲಿಟ್ಟು ತವರಿಗೆ ಹೊರಡುತ್ತಾಳೆ. ನಂತರ ಅವಳ ಗಂಡನ ಕೈಗೆ ಅವಳ ಪತ್ರ ಸಿಕ್ಕು, ಅದನ್ನು ಓದಿ ಅವನ ತಪ್ಪಿನ ಅರಿವಾಗಿ ಅವಳಲ್ಲಿ ಕ್ಷಮೆಯಾಚಿಸುತ್ತಾನೆ. ಕೊನೆಗೆ ದಂಪತಿಗಳು ಒಂದಾಗುತ್ತಾರೆ. ಹೀಗೆ ಈ ಕಥೆಯಲ್ಲಿ 'ಶಾಲಿನಿ'ಯ ಪಾತ್ರ ಚಿತ್ರಣಗೊಂಡಿದೆ.

'ಪಾ.ವೆಂ. ಹೇಳಿದ ಕಥೆ' ಕಥೆಯ ಪ್ರಮುಖ ಪಾತ್ರ **'ಅಂಬುಜಾ'**. ಕಥೆಯ ಶೀರ್ಷಿಕೆಯಲ್ಲಿ ಪಾ.ವೆಂ. ಹೆಸರಿದ್ದರೂ ಇಲ್ಲಿ ಪಾ.ವೆಂ. ಕೇವಲ ನೆಪ ಮಾತ್ರ, ಅಂಬುಜಾ ತನ್ನ ಕಥೆಯನ್ನು ಬೇರೊಬ್ಬರ ಕಥೆಯೆಂಬಂತೆ ಪಾ.ವೆಂ. ಅವರಲ್ಲಿ ಹೇಳಿಕೊಳ್ಳುತ್ತಾಳೆ. ಅಂಬುಜಾ ಈ ಕಥೆಯ ಕಥಾನಾಯಕಿ ಹಾಗೂ ನಿರೂಪಕಿ. ತನ್ನ ಗಂಡ ವಸುಧೇಂದ್ರಾಚಾರ್ಯನಿಂದ ವಂಚನೆಗೆ ಒಳಗಾಗುವಳು. ವಿಪರೀತ ಅನುಮಾನ ಸ್ವಭಾವದ, ಜಿಪುಣಾಗ್ರೇಸನ ಗಂಡನ ಕೈಯಲ್ಲಿ ನಲುಗುವ ಅಂಬುಜಾಳಿಗೆ ತನ್ನ ಗಂಡನ ವಂಚನೆಗಳು ಬಯಲಾದಾಗ ಗಂಡನನ್ನು ತೊರೆದು ಹೊಸ ಬದುಕು ಆರಂಭಿಸುತ್ತಾಳೆ. ಒಬ್ಬಂಟಿ ಹೆಣ್ಣಿನ ಅಂತರಂಗದ ಕಾವ್ಯವನ್ನು ಈ ಪಾತ್ರದ ಮೂಲಕ ರವಿಯವರು ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ. ಹೆಣ್ಣಿನ ಮಾರ್ದವತೆ ಈ ಪಾತ್ರದಲ್ಲಿ ಮಡುವುಗಟ್ಟಿದೆ.

'ವಿತಥ' ಕಥೆಯ ಪ್ರಮುಖ ಪಾತ್ರ **'ಅನಸೂಯ'** ಅಚ್ಯುತಾಚಾರ್ಯ (ಅಚ್ಚಿ)ಯ ಎರಡನೇ ಹೆಂಡತಿ. ಈ ಪಾತ್ರವೂ ಕೂಡಾ ಅಂಬುಜಾಳ ಪಾತ್ರದಂತೆ ನೊಂದ ಹೆಣ್ಣಿನ ಪಾತ್ರವೇ ಆಗಿದೆ. ಆದರೆ ನೋವಿನ ಬಗೆ ಬೇರೆ. ಅನಸೂಯಾಳ ಮನೆ ಅಂಬುಜಾಳ ಮನೆಯನ್ನು ನೆನಪಿಸುತ್ತದೆ. ಅವಳಿಗೆ ಗೊತ್ತಿದ್ದುದು ಕಟಾಂಜನದ ವರಾಂಡ, ನಡುಮನೆ, ಅಡುಗೆ ಮತ್ತು ಹಿತ್ತಲು. ರಾತ್ರಿ ಆಟಕ್ಕೆ ಅಚ್ಚಿ ಮತ್ತು ಕತ್ತಲು. ಹಗಲಾದರೆ ಅವಳು ಮತ್ತು ಹಿತ್ತಲು. ಅವಳ ಗಂಡ ಕೆಟ್ಟವನಲ್ಲದಿದ್ದರೂ ಅನಸೂಯ ಪ್ರತಿ ತಿಂಗಳು ತಪ್ಪದೇ ಮುಟ್ಟಾಗುತ್ತಾಳೆ. ಪಕ್ಕದ ಕಾಂಪೋಂಡಿನ ಕಮಲಂಗಿ ಆಚಾರ್ಯರ ಮೂರನೇ ಅಳಿಯ ದ್ವಯಪಾವನನೊಂದಿಗೆ ಮಿಲನ ಹೊಂದಿ ಗರ್ಭಿಣಿಯಾಗುವ ಅನುಸೂಯಳ ಸುಪ್ತ ಮನಸ್ಸಿನ ಭಾವನೆಗಳನ್ನು ಅಚ್ಚಿಯ ಮುಂದೆ ಸ್ಫೋಟಿಸುತ್ತಾಳೆ. ಕಥೆಯ ಕೊನೆಗೆ ಅನುಸೂಯ ಮುಟ್ಟಾಗುವ ಮೂಲಕ ಎಲ್ಲವೂ ಅವಳ ಭ್ರಮಿತ ಮನಸ್ಸಿನ ಕಲ್ಪನೆಗಳು ಎಂಬುದು ತಿಳಿಯುತ್ತದೆ. ಈ ಕಥೆಯ ಇನ್ನೊಂದು ಮುಖ್ಯ ಪಾತ್ರ **'ಅಚ್ಚಿ'**.

ರಿಕ್ತತೆಯೇ ಪಾತ್ರವಾಗಿ ಬಂದಂತೆ ಈ ಪಾತ್ರ ಮೂಡಿಬಂದಿದೆ. ನಡುಪರ್ತಿ ರಾಮಾಚಾರ್ಯರ ಮಗ **'ಅಚ್ಯುತಾಚಾರ್ಯ'** ಅಥವಾ **'ಅಚ್ಚಿ'** ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡವನು. ತಂದೆ ಇದ್ದರೂ ಪರಸ್ಪರ ಮಾತಿಲ್ಲದೇ ಬೆಳೆದವರು. ಮದುವೆಯಾದ ಮೇಲೆ ಈ ಅಂತರ ಇನ್ನು ಹೆಚ್ಚಾಯಿತು. ಇವನು ಕೂಸಿದ್ದಾಗ ಅತ್ತದ್ದು ಬಿಟ್ಟರೆ ಅವನ ಮನೆಯಲ್ಲಿ ಮತ್ತ್ಯಾರೂ ಅತ್ತಿಲ್ಲ. ಮೊದಲ ಹೆಂಡತಿ ಸತ್ತಾಗಲೂ ಸುಮ್ಮನಿರುತ್ತಾನೆ. ಆಫೀಸ್‌ಗೆ ಹೋಗುವ ಮುಂಚೆ ವದರು ಸನ್ನಿಯಿಂದ ಹಾಸಿಗೆ ಹಿಡಿದಿರುವ ತನ್ನ ತಂದೆಯ ಮೈ ತೊಳಿಸಿ, ಹಾಸಿಗೆ ಹಾಸಿ ಮಲಗಿಸುತ್ತಾನೆ. ಬಂದ ನಂತರ ಮತ್ತೆ ಅದನ್ನು ಮಾಡಿಸುತ್ತಾನೆ.

'ವೇಷಗಳು' ಕಥೆಯ **'ಶಿವಿ'** ಓದುಗರ ಗಮನ ಸೆಳೆಯುವ ಪಾತ್ರವಾಗಿದೆ. ಬೀದಿ ಬದಿಯಲ್ಲಿ, ಹಳ್ಳಿಗಳ ಚಾವಡಿಗಳಲ್ಲಿ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ನರ್ತಿಸುವ ವೇಷಗಾರ ತಂಡ ತಂಡದ ಶಿವಿ ಹನ್ನೊಂದನೇ ವಯಸ್ಸಿನಲ್ಲೇ ಕುಣಿತ ಪ್ರಾರಂಭಿಸಿದವಳು. ತಂಡದಲ್ಲಿದ್ದ ಜೊತೆಗಾರ ಚೆನ್ನೀರನನ್ನು ಪ್ರೇಮಿಸುತ್ತಾಳೆ. ಆದರೆ ಚೆನ್ನಿರನ ತಂದೆ ಸಿಮ್ಮಣ್ಣನ ಬಲಾತ್ಕಾರಕ್ಕೆ ಒಳಗಾಗಿ ಗರ್ಭಿಣಿಯಾಗುತ್ತಾಳೆ. ತುಂಬು ಗರ್ಭಿಣಿಯಾದ ಶಿವಿಯನ್ನು ಏಕಾಂಗಿಯಾಗಿ ಬಿಟ್ಟು ಹೊರಟು ಹೋಗುತ್ತದೆ ಅವಳ ತಂಡ. ನಂತರ ಅವಳನ್ನು ತನ್ನ ಮನೆಗೆ ಕರೆತರುವ ಬಸಪ್ಪ ಅವಳಿಗೆ ಶುಶ್ರೂಶೆ ಮಾಡುತ್ತಾ ತನ್ನ ಬದುಕಿಗೊಂದು ಹೊಸ ಅರ್ಥವನ್ನು ಕಲ್ಪಿಸಿಕೊಡುವ ಕನಸು ಕಾಣುತ್ತಾನೆ. ಶಿವಿಗೆ ಹೆರಿಗೆಯಾದಾಗ ಹುಟ್ಟುವುದು ಕೋತಿಯನ್ನು ಹೋಲುವ ವಿಕಾರಿ ಕೂಸು. ಮಗುವಿನ ವಿಕಾರ ಸ್ಥಿತಿಯನ್ನು ನೋಡುವ ಶಿವಿಗೆ ಆಘಾತ, ದುಃಖ, ನೋವು ಉಂಟಾದರೂ ಅವುಗಳನ್ನೆಲ್ಲಾ ನುಂಗಿಕೊಂಡು ತನ್ನ ಮಗುವನ್ನು ಪ್ರೀತಿಯಿಂದ ಕಾಣುತ್ತಾಳೆ. ಮುಚ್ಚಟೆಯಿಂದ ಅದಕ್ಕೆ ಅಲಂಕಾರ ಮಾಡಿ ತಾಯ್ತನದ ಸುಖ ಅನುಭವಿಸುತ್ತಾಳೆ. 'ಹೆತ್ತವರಿಗೆ ಹೆಗ್ಗಣ ಮುದ್ದು' ಎಂಬ ಗಾದೆ ಮಾತು ಶಿವಿಯ ಪಾತ್ರವನ್ನು ನೋಡಿದಾಗ ನೆನಪಾಗುತ್ತದೆ. ಶಿವಿಯ ಈ ಮಗುವಿನ ಹೆಸರೇ 'ಅಂಜಪ್ಪ' ಈ ಕಥೆಯ ಪರಿಣಾಮಕಾರಿ ಪಾತ್ರವಾಗಿ ಮೂಡಿಬಂದಿದೆ.

**'ಅಂಜಪ್ಪ'** ಶಿವಿಯ ಮಗು, ಸೀನಪ್ಪನ ಬಲಾತ್ಕಾರದ ಫಲ. ಕೋತಿಯನ್ನು ಹೋಲುವ, ವಿಕಾರಿ ರೂಪದ, ಮಂಗೋಲಾಯ್ಡ್ ಬೇಬಿ 'ಅಂಜಪ್ಪ'ನಿಗೆ ದೇಹ ಬೆಳೆದರೂ ಮಿದುಳಿನ ಬೆಳವಣಿಗೆ ಆಗುವುದಿಲ್ಲ. ದುಡಿಯದೇ ಕುಡಿದು ಬರುವ ಬಸಪ್ಪನಿಂದಾಗಿ ತನ್ನ ಮಗುವನ್ನೇ ದುಡಿಮೆಯ ಮೂಲವನ್ನಾಗಿ ಮಾಡಿಕೊಳ್ಳುವ ಪರಿಸ್ಥಿತಿ ಶಿವಿಗೆ ಬರುತ್ತದೆ. ಬೀದಿಯಲ್ಲಿ ಬಟ್ಟೆಹಾಕಿಕೊಂಡು ಅಂಜಪ್ಪನನ್ನು ಕುಳ್ಳರಿಸಿಕೊಂಡಾಗ ಸಾಕಷ್ಟು ಚಿಲ್ಲರೆ ಸಂಗ್ರಹವಾಗುತ್ತದೆ. ಇದರಿಂದ ಶಿವಿ, ಬಸಪ್ಪರ ಹೊಟ್ಟೆ ತುಂಬುವ ಕೆಲಸವನ್ನು ಅಂಜಪ್ಪ ಮಗು ಮಾಡುತ್ತದೆ. ಆಂಜನೇಯನನ್ನು ಹೋಲುವ ಮುಖವಿದ್ದುದರಿಂದ ಅಂಜಪ್ಪ ಎಂಬ ಹೆಸರು ಇಡುವುದು ಸರಿ ಎಂದು ಎಲ್ಲರೂ ಹೇಳಿದಾಗ ಶಿವಿಯೂ ಹಾಗೆ ಕರೆಯುತ್ತಾಳೆ. ಕಥೆಯ ಅಂತ್ಯದಲ್ಲಿ ದುರಾಸೆಗೆ ಬೀಳುವ ಬಸಪ್ಪ ಮನುಷ್ಯ ಸಂಬಂಧಗಳನ್ನೇ ಮರೆತು ನಿದ್ದೆಯಲ್ಲಿದ್ದ ಶಿವಿಯನ್ನು ಹಾಗೆ ಬಿಟ್ಟು ಮಗು ಅಂಜಪ್ಪನನ್ನು ಎತ್ತಿಕೊಂಡು ಪರಾರಿಯಾಗುತ್ತಾನೆ. ಊರೂರು ತಿರುಗಿ ಕೊನೆಗೆ ಸಿಮ್ಮಣ್ಣನ ತಂಡಕ್ಕೆ ಅಂಜಪ್ಪನನ್ನು ಮಾರಿ ಬಿಡುತ್ತಾನೆ. ಇದು ತನ್ನದೇ ಮಗು ಎಂದು ಗೊತ್ತಿಲ್ಲದ ಸಿಮ್ಮಣ್ಣ ಅದಕ್ಕೆ ಬಣ್ಣ ಹಚ್ಚಿ ಕುಣಿಸತೊಡಗುತ್ತಾನೆ. ಹೀಗೆ ಈ ಕಥೆಯಲ್ಲಿ ಅಂಜಪ್ಪ ಮಗುವಿನ ಪಾತ್ರ ತುಂಬಾ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಈ ಕಥೆಯಲ್ಲಿ ಶಿವಿ, ಅಂಜಪ್ಪ ಮಗುವಿನ ಪಾತ್ರ ಹೊರತುಪಡಿಸಿದರೆ ಮೂರನೇಯ ಪ್ರಮುಖ ಪಾತ್ರ 'ಬಸಪ್ಪ'ನದು.

**'ಬಸಪ್ಪ'** ತುಂಬು ಗರ್ಭಿಣಿಯಾದ ಶಿವಿಯನ್ನು ತನ್ನ ಮನೆಗೆ ಕರೆತಂದು ಶುಶ್ರೂಶೆ ಮಾಡಿದವನು. ಬಸಪ್ಪ ಒಂದು ಕಾಲದಲ್ಲಿ ಜೋಗಪ್ಪನಾಗಿದ್ದವನು. ಸಣ್ಣ ವಯಸ್ಸಿನಲ್ಲಿದ್ದಾಗ

ಬಸಪ್ಪನ ತಾಯಿ ದುಡಿಯಲು ತ್ರಾಣವಿಲ್ಲದೇ ತನ್ನ ಮಗನ ಮೇಲೆ ಏಳುಗುಡ್ಡದ ಎಲ್ಲಮ್ಮ ಬರುತ್ತಾಳೆಂದು ಅವರಿವರಲ್ಲಿ ಹೇಳಿಕೊಂಡು ಹಣ ಸಂಪಾದಿಸುತ್ತಿರುತ್ತಾಳೆ. ಸವದತ್ತಿ ಎಲ್ಲಮ್ಮನಿಗೆ ಹರಕೆ ಹೊತ್ತಿದ್ದ ತಾಯಿಯೊಂದಿಗೆ ಬಸಪ್ಪ ಗುಡಿಗೆ ಹೋಗಿದ್ದಾಗ ಅಲ್ಲಿ ಕಂಡ ವಿಚಿತ್ರ ಜಗತ್ತಿಗೆ, ವಿಚಿತ್ರ ವ್ಯಕ್ತಿಗಳಿಗೆ ಬೆದರಿ ತಾಯಿಯ ಮಾತುಗಳನ್ನೇ ನಿಜ ಎಂದು ನಂಬಿರುತ್ತಾನೆ. ನಂಬಿಕೆ ದಟ್ಟವಾದಂತೆಲ್ಲಾ ಅವನಲ್ಲಿ ಸ್ತ್ರೀ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ನಂತರ ಅವನ ತಾಯಿ ಸವದತ್ತಿಗೆ ಹೋಗಿ ಅವನಿಗೆ ಮುತ್ತು ಕಟ್ಟಿಸಿ ಜೋಗಪ್ಪನನ್ನಾಗಿ ಮಾಡಿಬಿಡುತ್ತಾಳೆ. ಕೈಯಲ್ಲಿ ಚೌಟಿಕೆ ಹಿಡಿದು, ನೆತ್ತಿಯ ಮೇಲೆ ಕೊಡ ಹೊತ್ತು ಊರೂರು ತಿರುಗತೊಡಗುತ್ತಾನೆ. ಆರು ವರ್ಷಗಳ ಕಾಲ ಜೋಗತಿಯರೊಂದಿಗೆ ಊರೂರು ತಿರುಗುವ ಬಸಪ್ಪನ ದೇಹದಲ್ಲಿ ಬಯಕೆಗಳು ಕಾಣಿಸಿಕೊಳ್ಳತೊಡಗಿದಾಗ ವಾಸ್ತವತೆಯ ಅರಿವಾಗಿ ಜೋಗಪ್ಪನ ವೇಷದಿಂದ ವಿಮುಕ್ತನಾಗಿ ಒಂದು ಕಡೆ ನೆಲೆನಿಂತು ದುಡಿದು ಜೀವಿಸಲು ಪ್ರಾರಂಭಿಸುತ್ತಾನೆ. ಶಿವಿಯ ಆಗಮನ ಬಸಪ್ಪನ ಬದುಕಿನಲ್ಲಿ ಆಸೆಯ ಮತಾಪು ಹೊತ್ತಿಸುತ್ತದೆ. ಅವಳೊಂದಿಗಿನ ದೈಹಿಕ ಮಿಲನಕ್ಕೆ ಕಾತರಿಸುವ ಬಸಪ್ಪ, ಸಹನೆ ಮೀರಿ ಅವಳನ್ನು ಕೂಡುತ್ತಾನೆ. ಪರಿಣಾಮ ಶಿವಿಗೆ 'ಡಿಸ್ ಪೆರೂನಿಯಾ' ಎಂಬ ಕಾಯಿಲೆಗೆ ತುತ್ತಾಗುತ್ತಾಳೆ. ಜೀವನದಲ್ಲಿ ಇನ್ನು ಸುಖದ ದಿನಗಳು ಮತ್ತೆ ಬರಲಾರವು ಎಂಬುದನ್ನು ಅರಿತ ಬಸಪ್ಪ ಅಂಜಪ್ಪ ಮಗುವನ್ನು ಸಿಮ್ಮಣ್ಣನ ತಂಡಕ್ಕೆ ಮಾರಿ, ತಾನು ಮತ್ತೆ ಸೀರೆ ಉಟ್ಟುಕೊಂಡು ಚೌಟಿಕೆ ಹಿಡಿದು ಜೋಗಪ್ಪನಾಗಿ ಪರಿವರ್ತನೆಯಾಗುತ್ತಾನೆ. ಜೋಗಪ್ಪ ಜೋಗತಿಯರ ವಿಚಿತ್ರ ಬದುಕನ್ನು 'ಹಂತ' ಕಥೆಯ ಪಾತ್ರಗಳ ಮೂಲಕ ರವಿಯವರು ನೈಜವಾಗಿ ಚಿತ್ರಿಸಿದ್ದಾರೆ.

'ಹಂತ' ಕಥೆಯ ಪ್ರಮುಖ ಪಾತ್ರ **'ರೇಣುಕಮ್ಮ'**. ಈಕೆ ಊರೂರು ತಿರುಗುವ ಜೋಗತಿ. ಹೊಸಪೇಟೆ ಹತ್ತಿರದ 'ಹುಲಿಗಿ' ಈಕೆ ಹುಟ್ಟಿ ಬೆಳೆದ ಊರು. ಗೋಣಿಚೀಲದಂತಹ ಮರಗಟ್ಟಿದ, ಸುಮಾರು ಮೂರು ಅಡಿ ಉದ್ದದ ಮಾಸಲು ಜಡೆಯನ್ನು ಹೊಂದಿದ ರೇಣುಕಮ್ಮ ಹೆಸರಿಗೆ ಫಕೀರಪ್ಪನೊಂದಿಗೆ ಸಂಸಾರ ನಡೆಸುತ್ತಿದ್ದರೂ ಸಾಕಷ್ಟು ಕಡೆ ಸೆರಗು ಹಾಸಿದವಳು. ವಯಸ್ಸಿದ್ದಾಗ ಸಾಕಷ್ಟು ಹಣ ಗಳಿಸಿಕೊಂಡು, ಒಡವೆ ಮಾಡಿಸಿಕೊಂಡಿರುತ್ತಾಳೆ. ಯೌವ್ವನದಲ್ಲಿ ತುಂಬಾ ಸೌಂದರ್ಯವತಿಯಾಗಿದ್ದ ಈಕೆಗೆ 'ಯಲ್ಲವ್ವ' ಎಂಬ ಸಂತಾನ. ತನ್ನಂತೆಯೆ ತನ್ನ ಮಗಳು ಬದುಕು ಹಾಳಾಗುವುದು ಬೇಡ. ಈ ಹಾಳು ಜೋಗತಿಯರ ಬದುಕು ತನಗೇ ಕೊನೆಯಾಗಲಿ. ತನ್ನ ಜೇನು ಕುರುಬರ ಜಾತಿಯಲ್ಲೇ ಸರಿಯಾದ ಗಂಡೊಂದನ್ನು ಹುಡುಕಿ ಮದುವೆ ಮಾಡಬೇಕೆಂಬ ಕನಸು ಕಾಣುತ್ತಾಳೆ. ಇವಳ ಒಡವೆಗಳಿಗಾಗಿ ಆಸೆ ಪಡುವ ಇವಳ ಜೊತೆಗಾರ ಫಕೀರಪ್ಪನ ಕೈಯಲ್ಲಿ ಕೊಲೆಯಾಗುತ್ತಾಳೆ. ಇವಳ ಮಗಳು ಯಲ್ಲವ್ವನ ಪಾತ್ರ ಕೂಡಾ ಇಲ್ಲಿ ಜೋಗತಿಯರ ಹೆಣ್ಣುಮಕ್ಕಳ ಬದುಕನ್ನು ಪ್ರತಿಬಿಂಬಿಸುತ್ತದೆ.

ರೇಣುಕಮ್ಮನ ಮಗಳು **'ಯಲ್ಲವ್ವ' (ಯಲ್ಲಿ)** ತನ್ನ ತಾಯಿಯ ಸಾವಿನ ರಹಸ್ಯ ಅರಿಯದೇ, ತಂದೆ ಫಕೀರಪ್ಪನೊಂದಿಗೆ ಹುಲಿಗಿಗೆ ಬರುತ್ತಾಳೆ. ಹೊಟ್ಟೆಪಾಡಿಗಾಗಿ ತಾಯಿ

ಕಲಿಸಿಕೊಟ್ಟ ಹಾಡಿನಿಂದ ತಂದೆಯೊಂದಿಗೆ ಹಾಡುತ್ತಾಳೆ. ಎಂಟನೇ ವಯಸ್ಸಿನಲ್ಲಿ ಹಾಡುತ್ತಾ ಚಿಲ್ಲರೆ ಕಾಸಿಗಾಗಿ ಜನರ ಗಮನ ಸೆಳೆಯಲು ಪ್ರಯತ್ನಿಸುತ್ತಾಳೆ. ಮಾನಗೆಟ್ಟ ಹೊಲಸು ಜೋಗತಿಯರ ಬದುಕನ್ನು ತುಂಬಾ ಹತ್ತಿರದಿಂದ ಕಾಣುವ ಯಲ್ಲವ್ವ (ಯಲ್ಲಿ) ತಾನು ಮದುವೆಯಾಗುವ ಕನಸು ಕಾಣುತ್ತಾಳೆ. ಆದರೆ ಫಕೀರಪ್ಪ ತನ್ನ ಹೊಟ್ಟೆ ಪಾಡಿಗೊಸ್ಕರ ಬಲವಂತವಾಗಿ ಮುತ್ತು ಕಟ್ಟಿಸುತ್ತಾನೆ. ಹೆಂಗಸಿನ ವೇಷದ ಷಂಡ ಎಂದೇ ಹೊರ ಜಗತ್ತಿಗೆ ಕಾಣುವ ಜೋಗಪ್ಪ ಯಂಕಟಪ್ಪನ ಬಲಾತ್ಕಾರಕ್ಕೆ ಒಳಗಾಗುತ್ತಾಳೆ. ಕೊನೆಗೆ ಅವನೊಂದಿಗೆ ಹೊಸ ಬದುಕನ್ನು ಪ್ರಾರಂಭಿಸುತ್ತಾಳೆ.

ಗಂಡು ಜೋಗಪ್ಪರ ಬದುಕಿನ ವೈಚಿತ್ರ್ಯವನ್ನು ಇದೇ 'ಹಂತ' ಕಥೆಯ ಫಕೀರಪ್ಪ, ಗೂಳೆಪ್ಪ, ಯಂಕಟಪ್ಪ ಪಾತ್ರಗಳ ಮೂಲಕ ಯಶಸ್ವಿಯಾಗಿ ರವಿಯವರು ಕಟ್ಟಿಕೊಟ್ಟಿದ್ದಾರೆ.

**'ಫಕೀರಪ್ಪ'** ರೇಣುಕಮ್ಮನ ಗಂಡ. ರೇಣುಕಮ್ಮ ತನ್ನ ಯೌವ್ವನದ ಮೊದಲ ದಿನಗಳಲ್ಲಿ ಹುಲಿಗಿ ಬಿಟ್ಟು ದೇಶ ಸುತ್ತುತ್ತಿದ್ದಾಗ ದೊರೆತ ಹಲವಾರು ಜೊತೆಗಾರರಲ್ಲಿ ಫಕೀರಪ್ಪ ಕೂಡಾ ಒಬ್ಬ. ರೇಣುಕಮ್ಮನಿಗಿಂತ ಆರು ವರ್ಷ ಕಿರಿಯವನು. ರೇಣುಕಮ್ಮಳ ಮೈ ಮೇಲಿನ ಒಡವೆಗಳಿಗಾಗಿ ದುರಾಸೆ ಪಟ್ಟು ಅವಳನ್ನು ಹತ್ಯೆ ಮಾಡುತ್ತಾನೆ. ಹಲವಾರು ಜೋಗತಿಯರೊಂದಿಗಿನ ದೈಹಿಕ ಸಂಬಂಧ ಹಾಗೂ ಅತಿಯಾದ ಕುಡಿತದಿಂದ ಭಯಂಕರವಾದ ವಿಚಿತ್ರ ರೋಗಕ್ಕೆ ಬಲಿಯಾಗುತ್ತಾನೆ. ಪರಿಣಾಮವಾಗಿ ತನ್ನ ಪುರುಷತ್ವವನ್ನು ಸಂಪೂರ್ಣವಾಗಿ ಕಳೆದುಕೊಳ್ಳುತ್ತಾನೆ. ಅದರ ಪರೀಕ್ಷೆಗಾಗಿ ತನ್ನ ಮಗಳು ಯಲ್ಲಿಯ ಮೇಲೆಯೇ ಅತ್ಯಾಚಾರ ಎಸಗಲು ಪ್ರಯತ್ನಿಸಿ ವಿಫಲನಾಗುತ್ತಾನೆ. ದೇಹದಲ್ಲಿ ಹೆಣ್ಣಿನ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಕೊನೆಗೆ ಮುತ್ತು ಕಟ್ಟಿಸಿಕೊಂಡು ಜೋಗಪ್ಪನಾಗುತ್ತಾನೆ. ಕೈಯಲ್ಲಿ ಚೌಟಿಕೆ ಹಿಡಿದು ಮೀಟುತ್ತಾ ಹಾಡು ಹೇಳಿ ಭಿಕ್ಷೆ ಬೇಡುತ್ತಾನೆ. ತನ್ನ ಹೊಟ್ಟೆಪಾಡಿಗಾಗಿ ತನ್ನ ಮಗಳು ಯಲ್ಲಿಗೆ ಮುತ್ತು ಕಟ್ಟಿಸುತ್ತಾನೆ. ಒಂದು ಕಾಲದಲ್ಲಿ ಗಂಡಸಾಗಿದ್ದವನು ಕ್ರಮೇಣ ಜೋಗಪ್ಪನಾಗಿ ಪರಿವರ್ತನೆಯಾಗುವ ಪ್ರಕ್ರಿಯೆಯನ್ನು ಇಲ್ಲಿ ಫಕೀರಪ್ಪನ ಪಾತ್ರದ ಮೂಲಕ ನೈಜವಾಗಿ ಚಿತ್ರಣಗೊಂಡಿದೆ. ಈ ಕಥೆಯ ಇನ್ನೊಂದು ಮುಖ್ಯ ಪಾತ್ರ 'ಗೂಳೆಪ್ಪ'.

**'ಗೂಳೆಪ್ಪ'** ಎಪ್ಪತ್ತೂರು ವರ್ಷ ವಯಸ್ಸಿನ ಮುದುಕ. ಹುಲಿಗಿಯಲ್ಲಿ ತಲತಲಾಂತರದಿಂದ ಉಳಿದಿದ್ದ ಚೌಟಕಿ ಮನೆತನದ ಕೊನೆಯ ವ್ಯಕ್ತಿ. ಹುಲಿಗಿಯ ಜೋಗತಿಯರಿಗೆಲ್ಲಾ ಸಂಗೀತದ ಗುರು. ಫಕೀರಪ್ಪನ ಆರೋಗ್ಯ ಹದಗೆಟ್ಟಾಗ ಆಸ್ಪತ್ರೆಗೆ ಸೇರಿಸುತ್ತಾನೆ. ನಂತರ ಅವನಿಗೆ ಮುತ್ತು ಕಟ್ಟಿಸಿ ಜೋಗಪ್ಪನನ್ನಾಗಿ ಮಾಡುತ್ತಾನೆ. ಮಕ್ಕಳಿಲ್ಲದ ಗೂಳೆಪ್ಪನಿಗೆ ಫಕೀರಪ್ಪನ ಮಗಳು ಯಲ್ಲಿಯನ್ನು ಕಂಡರೆ ತುಂಬಾ ಅಕ್ಕರೆ. ಖಾಯಿಲೆಯಿಂದಾಗಿ ಹಾಸಿಗೆ ಹಿಡಿದು ಮಲಗುವ ಗೂಳೆಪ್ಪ ಜೋಗತಿಯೊಬ್ಬಳ ಮನೆಯಲ್ಲಿ ಕೊನೆಯುಸಿರೆಳೆಯುತ್ತಾನೆ.

**'ಯಂಕಟಪ್ಪ'** ಹೊರ ಜಗತ್ತಿಗೆ ಷಂಡ ಎಂಬಂತೆ ಕಾಣಿಸಿಕೊಳ್ಳುವ ಆದರೆ ಪುರುಷತ್ವವನ್ನು ಹೊಂದಿದ ಜೋಗಪ್ಪ. ಫಕೀರಪ್ಪನೊಂದಿಗೆ ಸಖ್ಯ ಬೆಳೆಸಿಕೊಂಡು ಅವನ ಮಗಳು ಯಲ್ಲಿಯ

ಮೇಲೆ ಬಲತ್ಕಾರವೆಸಗುತ್ತಾನೆ. ಕೊನೆಗೆ ತನ್ನ ವೇಷವನ್ನು ಕಳಚಿ ಅವಳೊಂದಿಗೆ ಹೊಸ ಬದುಕನ್ನು ಪ್ರಾರಂಭಿಸುತ್ತಾನೆ.

ಪಾತ್ರದ ದೃಷ್ಟಿಯಿಂದ 'ಹಂತ' ಕಥೆ ತುಂಬಾ ವಿಭಿನ್ನವಾಗಿ ಕಾಣಿಸುತ್ತದೆ. ಜೋಗಮ್ಮ ಜೋಗಪ್ಪರ ವಿಚಿತ್ರ ಲೋಕದ ಜೀವನ ವಿಧಾನವನ್ನು, ಆ ಲೋಕದ ರೀತಿ ರಿವಾಜುಗಳನ್ನು ಈ ಕಥೆಯ ಮೂಲಕ ರವಿಯವರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಸ್ಥಿತಿಯೇ ಸರ್ವಸ್ವವಾದಂತೆ ಮೂಡಿಬಂದಿರುವ ಪಾತ್ರ 'ಕುಹು ಕುಹರ' ಕಥೆಯ ಕಥಾನಾಯಕ **'ಕಲಾವಿದ'**ನದು. ಇಡೀ ಕಥೆ ಈ ಪಾತ್ರದ ಮೂಲಕ ನಿರೂಪಣೆಯಾಗುತ್ತದೆ. ಕಲಾವಿದ ತನ್ನ ಭಯಾನಕ, ವಿಕ್ಷಿಪ್ತ ಬದುಕನ್ನು ಈ ಕಥೆಯ ತನ್ನ ಪಾತ್ರದ ಮೂಲಕ ತೆರೆದಿಡುತ್ತಾನೆ. ಫುಟ್‌ಪಾತ್‌ನ ಮೇಲೆ ಚಿತ್ರ ಮಾರುವ ಕಲಾವಿದನನ್ನು ನಲವತ್ತರ ವಯಸ್ಸಿನ ಬಿಳಿ ತೊಗಲಿನ ಶ್ರೀಮಂತ ಹೆಂಗಸು ಅವನ ಚಿತ್ರವನ್ನು ಖರೀದಿಸಿ ತನ್ನ ಮನೆಗೆ ಕರೆತರುತ್ತಾಳೆ. ತನ್ನ ಚಿತ್ರವನ್ನು ಬಿಡಿಸೆಂಬ ಅವಳ ಕೋರಿಕೆಗೆ ಚಿತ್ರ ಬಿಡಿಸತೊಡಗುತ್ತಾನೆ. ಅದು ಸಾಧ್ಯವಾಗದೇ ಭಯಾನಕ ಆಕ್ಟೋಪಸ್‌ನ ಚಿತ್ರ ಬಿಡಿಸುತ್ತಾನೆ. ಈ ಮಧ್ಯೆ ಆ ಹೆಂಗಸಿನೊಂದಿಗೆ ದೈಹಿಕ ಸಂಪರ್ಕ ಹೊಂದುತ್ತಾನೆ. ಸಾರಾಯಿ ಅಂಗಡಿಯೊಂದರಲ್ಲಿ ಪೀಟರ್ ಸಾಲಮನ್ ಎಂಬ ಮುದುಕನ ಪರಿಚಯವಾಗಿ ಮುದುಕನ ಇನ್ನೊಬ್ಬ ಮಿತ್ರ ಸುಬ್ಬಯ್ಯ ಇವರೊಂದಿಗೆ ಸಮಾಧಿಯ ಮೇಲಿನ ಅಮೃತಶಿಲೆಯ ಹಾಸುಗಲ್ಲುಗಳು, ಶವದ ಮೈಮೇಲಿನ ಒಡವೆಗಳು, ಕೊನೆಗೆ ಶವಗಳನ್ನು ಕದ್ದು ಮಾರುವುದನ್ನು ವೃತ್ತಿಯನ್ನಾಗಿ ಮಾಡಿಕೊಳ್ಳುತ್ತಾನೆ. ಒಮ್ಮೆ ಹೀಗೆ ಹೆಣ ಕದಿಯುವಾಗ ಕಲಾವಿದನ ಚಿತ್ರವನ್ನು ಕೊಂಡ ಶ್ರೀಮಂತ ಹೆಂಗಸೇ ಶವವಾಗುತ್ತಾಳೆ. ಅದನ್ನು ಕಂಡ ಕಲಾವಿದನಿಗೆ ಭೀಕರತೆಯ ಅನುಭವವಾಗುತ್ತದೆ. ಮಾನಸಿಕ ಅಸ್ವಸ್ಥನಾಗುತ್ತಾನೆ. ನಿರೀಂದ್ರಿಯ ಸ್ಥಿತಿಯ ವ್ಯಕ್ತಿಯೊಬ್ಬನ ಮಾನಸಿಕ ತುಮುಲಗಳ ಚಿತ್ತಾರವೆಂಬಂತೆ ಈ ಪಾತ್ರ ಮೈದಳೆದಿದೆ.

ಈ ಕಥೆಯಲ್ಲಿ ಗಮನ ಸೆಳೆಯುವ ಇನ್ನೊಂದು ಪಾತ್ರ ಪೀಟರ್ ಸಾಲಮನ್‌ನ ಹೆಂಡತಿಯದು. ಈ ಪಾತ್ರಕ್ಕೆ ಹೆಸರಿಲ್ಲ. ಇಡೀ ಕಥೆಯೇ ರಿಕ್ತ ಸ್ಥಿತಿಯಲ್ಲಿ ಸಾಗುತ್ತಿರುವಾಗ ಕಥೆಯಲ್ಲಿ ಪ್ರೀತಿಯ, ಕರುಣೆಯ ಆರ್ದ್ರ ಭಾವ ಕಾಣಿಸುವುದು ಪೀಟರ್ ಸಾಲಮನ್ ಹೆಂಡತಿಯಲ್ಲಿ. ಆಕೆ ಮೈ ಮಾರಿಕೊಳ್ಳುವ ವೇಶ್ಯೆಯಾಗಿದ್ದರೂ ಅವಳಲ್ಲಿರುವ ಅಂತಃಕರಣ, ಕಲಾವಿದನಡೆಗಿರುವ ಪ್ರೀತಿ, ಸಹೋದರತೆಯ ಮಮತೆ ವಾತ್ಸಲ್ಯ ಇವೆಲ್ಲವೂ ಕಥೆಗೆ ಕೊಂಚ ಮಟ್ಟಿಗೆ ಮೆರಗು ನೀಡಿದೆ.

'ಕುಹು ಕುಹರ' ಕಥೆಯ ಕಲಾವಿದನ ಪರಿಸ್ಥಿತಿಯಂತೆ 'ಪರಿಚಯ' ಕಥೆಯ ಕಥಾನಾಯಕ **'ಕಥೆಗಾರ ಶ್ರೀವತ್ಸ'**ನದೂ ಅದೇ ಮನಸ್ಥಿತಿ. ನಿರೀಂದ್ರಿಯ ಸ್ಥಿತಿಯನ್ನೇ ಹೊದ್ದುಕೊಂಡಂತೆ ಈ ಪಾತ್ರ ಚಿತ್ರಣಗೊಂಡಿದೆ. 'ಕುಹು ಕುಹರ' ಕಥೆಯಂತೆ ಈ ಕಥೆಯಲ್ಲಿಯೂ ಕೂಡಾ ಕಥಾನಾಯಕನೇ ಕಥೆಯ ನಿರೂಪಕ. ಕಥೆಗಾರ ಶ್ರೀವತ್ಸ ಮನೆಯ ಕತ್ತಲ ಕೋಣೆಯಲ್ಲೇ

ಸದಾ ಇರುವವನು. ಪತ್ರಿಕೆಗಳಿಗೆ ಕಥೆ ಬರೆದು ಕಳಿಸುತ್ತಾರೆ. ಪತ್ರಿಕೆಯೋರು ದುಡ್ಡು ಕಳಿಸುತ್ತಾರೆ ಅದೇ ಅವನ ಸಂಪಾದನೆ. ಗೂನುಬೆನ್ನು, ಬಾಗಿದ ಕಾಲು, ಭುಜದಿಂದ ತಟಕ್ಕನೆ ಇಳಿಬಿದ್ದಂತಹ ಕೈಗಳು ಜೊತೆಗೆ ಚರ್ಮರೋಗ, ಒಂದು ಕಣ್ಣು ದೊಡ್ಡದು ಇರುವಂತಹ ಶ್ರೀವತ್ಸ ವಿಕಾರ ರೂಪದವನು. ಇವನಿಗೆ ಇಬ್ಬರು ತಂಗಿಯರು ಒಬ್ಬಳಿಗೆ ಉಬ್ಬುಹಲ್ಲು, ಮೆಳ್ಳೆಗಣ್ಣನ್ನು ಹೊಂದಿರುವವಳು. ಇನ್ನೊಬ್ಬಳಿಗೆ ಮುಖದ ತುಂಬಾ ಹಳೇ ಸಿಡುಬಿನ ಕಲೆಗಳು, ಹುಬ್ಬು ಹರಿದಿದೆ, ಹಲ್ಲುಬ್ಬು, ಕತ್ತಲಿಗಿನ್ನೊಂದು ಹೆಸರಿನಂತಿದ್ದಾಳೆ. ಪತ್ರಿಕೆಯೊಂದರ ಸಂಪಾದಕರು ತಮ್ಮ ಪತ್ರಿಕೆಯ ಹತ್ತನೇ ವರ್ಷದ ವಾರ್ಷಿಕೋತ್ಸವಕ್ಕೆ ಶ್ರೀವತ್ಸನಿಂದ ಕಥೆ ಹಾಗೂ ಭಾವಚಿತ್ರ, ಕಿರುಪರಿಚಯದ ವಿವರಗಳನ್ನು ಕಳಿಸಿ ಎಂದು ವಿನಂತಿಸಿರುತ್ತಾರೆ. ತನ್ನ ಪರಿಚಯದ ಬಗ್ಗೆ ಏನೆಂದು ಬರೆಯಲಿ ಎಂದು ಹೈರಾಣಾಗುವ ಕಥಾನಾಯಕ ಶ್ರೀವತ್ಸ ತನ್ನ ತಂಗಿಯರ ಕೋಣೆಗಳು, ಬ್ಯಾಗುಗಳನ್ನೆಲ್ಲಾ ಶೋಧಿಸುತ್ತಾನೆ. ಅದರಲ್ಲಿ ಅಂಥದ್ದೇನೂ ಸಿಗುವುದಿಲ್ಲ. ದೇವರ ಕೋಣೆಯಲ್ಲಿ ದೇವರ ಸಂಪುಟದ ಮುಂದೆ ತನ್ನ ತಂದೆ ಇಟ್ಟಿದ್ದ ಪುಟ್ಟ ಕೆಂಪು ಪೆಟ್ಟಿಗೆಯನ್ನು ಶೋಧಿಸುತ್ತಾನೆ. ಅದರಲ್ಲಿದ್ದ ಮೂವತ್ತು ವರ್ಷಗಳ ಹಿಂದಿನ ಪತ್ರ ಅವನ ಹಾಗೂ ತಂಗಿಯರ ಜನ್ಮರಹಸ್ಯವನ್ನು ಬಿಚ್ಚಿಡುತ್ತದೆ. ಇದುವರೆಗೆ ತಾವು ಅಂದುಕೊಂಡಂತೆ ತಮ್ಮ ತಂದೆ ಇವನಲ್ಲ ಎಂಬುದು ತಿಳಿಯುತ್ತದೆ. ತಂದೆ ಅನ್ನಿಸಿಕೊಂಡವನು ತನ್ನ ರಹಸ್ಯ ಬಯಲಾದುದು ಗೊತ್ತಾಗಿಯೋ ಏನೋ ಸಾಯುತ್ತಾನೆ. ಅದುವರೆಗೂ ಹೊರ ಪ್ರಪಂಚದೊಂದಿಗೆ ಸಂಪರ್ಕವನ್ನೇ ಕಡಿದುಕೊಂಡು ಕತ್ತಲೆ ಕೋಣೆಯೊಳಗೆ ಅಂತರ್ಮುಖಿಯಾಗಿ ಬದುಕುತ್ತಿದ್ದ ಶ್ರೀವತ್ಸ ತನ್ನ ತಂಗಿಯರ ಮೇಲೆ ತುಂಬು ಪ್ರೀತಿ ಉಂಟಾಗಿ ಅವರಿಬ್ಬರ ಜಾತಕವನ್ನು ಹಿಡಿದು ಹೊರಬರುತ್ತಾನೆ. ಈ ಕಥೆಯಲ್ಲಿ ಕಥಾನಾಯಕ ತನ್ನ ಸ್ಥಿತಿಯಿಂದ ಬದಲಾವಣೆ ಹೊಂದುವುದನ್ನು ಕಥೆಯ ಅಂತ್ಯದಲ್ಲಿ ಚಿತ್ರಣಗೊಂಡಿದೆ.

'ಕುಹು ಕುಹರ', 'ಪರಿಚಯ' ಕಥೆಯ ಕಥಾನಾಯಕರ ಮನಸ್ಥಿತಿಯೇ **'ಆಕ್ರಮಣ' ಕಥೆಯ 'ಕಥಾನಾಯಕ'**ನದ್ದಾಗಿದೆ. ಈ ಪಾತ್ರಕ್ಕೆ ಹೆಸರೇ ಇಲ್ಲ. ಪಾತ್ರವೇ ಕಥೆಯನ್ನು ನಿರೂಪಿಸುತ್ತದೆ. ವಿಪರೀತ ಎನ್ನಿಸುವಷ್ಟು ಅಂತರ್ಮುಖಿಯಾಗಿರುವ ಕಥಾನಾಯಕನಿಗೆ ಒತ್ತಾಯದಿಂದ ಮದುವೆ ಮಾಡಿಸುತ್ತಾನೆ ಅವನ ಮಿತ್ರ ಸುಧೀಂದ್ರ. ಏಕಾಂತವನ್ನೇ ಹೆಚ್ಚು ಇಷ್ಟಪಡುವ ಕಥಾನಾಯಕನಿಗೆ ಹೆಂಡತಿಯೊಂದಿಗಿನ ಸಹ ಜೀವನ ಅಸಹನೆಯನ್ನುಂಟು ಮಾಡುತ್ತದೆ. ಮಾನಸಿಕವಾಗಿ ಸದಾ ಅವಳೊಂದಿಗೆ ಅಂತರವನ್ನು ಕಾಯ್ದುಕೊಳ್ಳುವ ಅವನು ದೈಹಿಕವಾಗಿ ಅವಳನ್ನು ಕೂಡುತ್ತಿರುತ್ತಾನೆ. ಗರ್ಭಿಣಿಯಾಗುವ ಹೆಂಡತಿ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಜೀವನದಲ್ಲಿ ಯಾರನ್ನೂ ಪ್ರೀತಿಸಿದ ಕಥಾನಾಯಕ ಹೆಂಡತಿ ಮತ್ತು ಮಗುವಿನ ವಿಷಯದಲ್ಲಿ ಅಷ್ಟೇ ಉದಾಸೀನದಿಂದಿರುತ್ತಾನೆ. ಇವೆಲ್ಲದರ ನಡುವೆ ಗೆಳೆಯ ಸುಧೀಂದ್ರನ ಕಾಳಜಿ, ಪ್ರೀತಿ, ಸ್ನೇಹ ಇರುತ್ತದೆ. ತನ್ನ ದಿವ್ಯ ಏಕಾಂತದಲ್ಲಿ ತನ್ನದೇ ಆದ ಲೋಕದಲ್ಲಿ ವಿಹರಿಸುವ ಕಥಾನಾಯಕನಿಗೆ ಅವನ ಹೆಂಡತಿ ತನ್ನ ಮಾತುಗಳಿಂದ, ವರ್ತನೆಗಳಿಂದ, ಭಾವನೆಗಳಿಂದ ಪದೇ ಪದೇ ತನ್ನ ಮೇಲೆ ಆಕ್ರಮಣ ಮಾಡುತ್ತಿದ್ದಾಳೆ

ಎಂದು ಅನಿಸತೊಡಗುತ್ತದೆ. ಮಗುವಿನ ಆರೋಗ್ಯದಲ್ಲಿ ಏರುಪೇರಾಗಿ ಮಗು ಸಾಯುತ್ತದೆ. ಮಗುವಿನ ಆರೋಗ್ಯದ ಬಗ್ಗೆ ತುಂಬಾ ಕಾಳಜಿ ವಹಿಸಿದ್ದ ಸುಧೀಂದ್ರ ಬಿಕ್ಕಿ ಬಿಕ್ಕಿ ಅಳುತ್ತಾನೆ. ಆದರೆ ಕಥಾನಾಯಕ ಮೌನವಾಗಿರುತ್ತಾನೆ. ಪದೇ ಪದೇ ಸತ್ತು ಹೋದ ತನ್ನ ಮಗುವನ್ನೇ ನೆನಪಿಸಿಕೊಂಡು ಅಳುವ ಹೆಂಡತಿಯಿಂದ ತಡವಾಗಿ ಮನೆಗೆ ಬರುವ ಕಥಾನಾಯಕನಿಗೆ ಒಳಮನೆಯಲ್ಲಿ ಗೆಳೆಯ ಸುಧೀಂದ್ರ ತನ್ನ ಹೆಂಡತಿಗೆ ಸಾಂತ್ವನ ನೀಡುತ್ತಿರುತ್ತಾನೆ. 'ಅದಕ್ಕಿಂತಲೂ ಚೆನ್ನಾಗಿರೋ ಇನ್ನೊಂದು ಮಗು ಹುಟ್ಟುತ್ತೆ' ಎನ್ನುತ್ತಾ ಅವಳನ್ನು ನಗ್ನಗೊಳಿಸುತ್ತಿರುತ್ತಾನೆ. ಒಳಕೋಣೆಯೊಳಗೆ ಬಗ್ಗಿ ನೋಡುವ ಕಥಾನಾಯಕನಿಗೆ ಒಳಗಿನ ದೃಶ್ಯ ಕಾಣುತ್ತದೆ. ಅದಕ್ಕೇನೂ ಪ್ರತಿಕ್ರಿಯೆ ತೋರದೆ ಈ ಹಿಂದೆ ಮಾಡಿಸಿಕೊಂಡ ವೀರ್ಯ ಪರೀಕ್ಷೆಯ ಫಲಿತಾಂಶವಿದ್ದ ಕಾಗದ ನೋಡುತ್ತಾನೆ. 'ಜೀವಾಣುವಿಲ್ಲದ ವೀರ್ಯ ಮಕ್ಕಳನ್ನು ಹುಟ್ಟಿಸಲಾರದು' ಎಂಬ ವಿವರಗಳನ್ನು ಓದಿದಾಗ ಸತ್ತ ಮಗುವಿನಲ್ಲಿ ಗೆಳೆಯ ಸುಧೀಂದ್ರನ ಹೋಲಿಕೆಗಳು ಕಾಣಿಸಲಾರಂಭಿಸುತ್ತವೆ. ಯಾವುದಕ್ಕೂ ಪ್ರತಿಕ್ರಿಯೆ ತೋರದೇ ನಿರ್ಲಿಪ್ತತೆಯಿಂದ ತನ್ನ ಭಯಾನಕ ಮೌನದೊಳಗೆ, ಏಕಾಂತದೊಳಗೆ ಮುಳುಗಿ ಹೋಗುತ್ತಾನೆ ಕಥಾನಾಯಕ.

ದೇವನೂರು ಮಹಾದೇವರವರು ಸೃಷ್ಟಿಸಿದ ಅನೇಕ ಪಾತ್ರಗಳು ನವಿರಾದ ಹಾಸ್ಯ ಪ್ರಜ್ಞೆಯಿಂದ ಕೂಡಿದ್ದು, ಆ ಹಾಸ್ಯದ ಒಳಗೇ ದುರಂತದ ದನಿಯಿರುತ್ತದೆ. (ಉದಾ: 'ಒಡಲಾಳ'ದ ಸಾಕವ್ವ, ದುಪ್ಪಿ ಕಮೀಶನರ್, 'ಅಮಾಸ' ಕಥೆಯ ಅಮಾಸ ಇತ್ಯಾದಿ) ಇಂತಹ ಪಾತ್ರಗಳ ಗುಂಪಿಗೆ ಸೇರ್ಪಡೆಯಾಗಬಲ್ಲ ಪಾತ್ರವೇ 'ಮೈಕು' ಕಥೆಯ ಕಥಾನಾಯಕ **'ವೀರಸಂಗಪ್ಪ ನಾಗಪ್ಪ ಹೂಗಾರ'**ನದು. ಆರಂಭದಲ್ಲಿ ಲಘು ಹಾಸ್ಯದ ಶೈಲಿಯಲ್ಲಿ ಪಾತ್ರ ಬಿಂಬಿತವಾದರೂ ಕೊನೆಗೆ ದುರಂತದಲ್ಲಿ ಅಂತ್ಯವಾಗುತ್ತದೆ. ಹುಬ್ಬಳ್ಳಿಯ ರಸ್ತೆ ಸಾರಿಗೆ ಸಂಸ್ಥೆಯ ನೌಕರ ವೀರಸಂಗಪ್ಪ ನಾಗಪ್ಪ ಹೂಗಾರ. ತನ್ನ ಹೆಂಡತಿಯ ಸಾವಿನಿಂದ ಮಂಕಾಗಿ ಮಹಾಮೌನಿಯಾಗಿ ಬಿಡುತ್ತಾನೆ. ಒಬ್ಬಂಟಿ ಜೀವನವನ್ನು ಸಾಗಿಸುವ ಹೂಗಾರ ತನ್ನ ವಿಚಿತ್ರವಾದ ಮಾತುಗಳಿಂದ ಬಸ್‌ಸ್ಟ್ಯಾಂಡ್‌ನ ಮೈಕ್ ಮೂಲಕ ಅನೌನ್ಸ್‌ಮೆಂಟ್ ಮಾಡಲು ಶುರುವಿಟ್ಟುಕೊಳ್ಳುತ್ತಾನೆ. ಧರ್ಮ, ರಾಜಕೀಯ, ಕೋಮುಗಲಭೆ, ಆರ್ಥಿಕ ನೀತಿ, ಮಂತ್ರಿಮಂಡಲ ಮುಂತಾದ ವಿಷಯಗಳ ಬಗ್ಗೆ ಮಾತಾಡಲು ಪ್ರಾರಂಭಿಸುತ್ತಾನೆ. ಇವನ ಮಾತುಗಳನ್ನು ಕೇಳಲೆಂದೇ ಜನ ಗುಂಪುಗೂಡುತ್ತಾರೆ. ಸಾರಿಗೆ ಅಧಿಕಾರಿಗಳಿಗೆ ಇದೊಂದು ಸಮಸ್ಯೆಯಾಗಿ ಪರಿಣಮಿಸಿ ಹೂಗಾರನಿಗೆ ಮೆಮೋ ಕೊಟ್ಟರೂ, ಷೋಕಾಸ್ ನೋಟಿಸ್ ಕೊಟ್ಟರೂ ಬದಲಾಗುವುದಿಲ್ಲ. ಕೊನೆಗೆ ಲೌಡ್ ಸ್ಪೀಕರ್‌ಗೂ, ಕಂಟ್ರೋಲ್ ರೂಂ ಗೂ ಇರುವ ಕನೆಕ್ಷನ್ ತಪ್ಪಿಸಲಾಗುತ್ತದೆ. ಇದರಿಂದ ಮಾನಸಿಕ ವಿಕಲತೆಗೆ ಒಳಗಾಗುವ ಹೂಗಾರ ಬಸ್‌ಸ್ಟ್ಯಾಂಡ್‌ನ್ನೇ ತೊರೆದು ಪತ್ರಿಕೆಯೊಂದನ್ನು ಸುರುಳಿಮಾಡಿ ಅದಕ್ಕೆ ಬಾಯಿಟ್ಟು ಪಾರ್ಕ್‌ನಲ್ಲಿ ಕುಳಿತು ಮಾತಾಡಲು ಶುರು ಮಾಡುತ್ತಾನೆ. ಆದರೆ ಅವನ ಮಾತುಗಳು ಜನರಿಗೆ ತಲುಪುವುದಿಲ್ಲ. ಹೀಗೆ ಈ ಪಾತ್ರ ವಿಷಾದದ ಛಾಯೆಯನ್ನು ಹರಡುತ್ತದೆ.

'ಮೈಕು' ಕಥೆಯ ಹೂಗಾರನಂತೆ 'ಕತ್ತಲೆ, ನೋವು ಮತ್ತು ಹೆಣ' ಕಥೆಯ **'ಹುಸೇನಸಾಬ'**ನ ಪಾತ್ರವೂ ಚಿತ್ರಣಗೊಂಡಿದೆ. ಹುಸೇನಸಾಬ ಪೊಲೀಸ್ ಠಾಣೆಯಲ್ಲಿ ಜಮ್ದಾರ. ಇಪ್ಪತ್ತು ವರ್ಷಗಳಿಂದಲೂ ಸದಾ ಲಾಠಿ ಹಿಡಿದು ತಿರುಗುವ ಇವನಿಗೆ ಸಂಜೀವಮ್ಮನ ಓಣಿಯ ಸೂಳೆಯರು 'ಲಕಡೀ ಜಮ್ದಾರ' ಎಂಬ ಅಡ್ಡ ಹೆಸರಿನಿಂದ ಕರೆಯುತ್ತಾರೆ. ಮೊದಲ ಹೆಂಡತಿಗೆ ಮೂರು ಮಕ್ಕಳು, ಎರಡನೇ ಹೆಂಡತಿಗೆ ಆರುಮಕ್ಕಳು ಸೇರಿದಂತೆ ಒಂಬತ್ತು ಮಕ್ಕಳ ತಂದೆ. ಇವನು ತುಂಬಾ ಪ್ರೀತಿಸುವ ಮೊದಲ ಹೆಂಡತಿ ಶಂಶಾದ್ ಆಪರೇಷನ್ ಮಾಡಿಸಿಕೊಳ್ಳುವ ಸಮಯದಲ್ಲಿ ನಂಜಾಗಿ ಆಸ್ಪತ್ರೆಯಲ್ಲಿ ಸಾಯುತ್ತಾಳೆ. ಸಾಲ ಸೋಲ ಮಾಡಿ ಅವಳ ಮಕ್ಕಳಿಗೆ ಮದುವೆ ಮಾಡುತ್ತಾನೆ. ಹುಸೇನಸಾಬನ ಎರಡನೇ ಹೆಂಡತಿ ಫಾತೀಮಾ. ಇವಳ ಹಿರಿ ಮಗಳು ನೂರ್‌ಜಹಾನ್ (ನೂರಿ).

ಹದ್ದಿನಗುಂಡು ರೈಲ್ವೆ ಸ್ಟೇಷನ್‌ದಲ್ಲಿ ಹೆಣ ಕಾಯಬೇಕಾದ ಸಂದರ್ಭದಲ್ಲು ಹುಸೇನ ತನ್ನ ಹಳೆಯ ನೆನಪುಗಳನ್ನು ಕೆದಕಿಕೊಳ್ಳುತ್ತಾನೆ. ತಾನು ಬಾಲಕನಾಗಿದ್ದಾಗ ಸತ್ತ ತಾಯಿಯ ಅಸಹಜ ಸಾವು, ಮೊದಲ ಹೆಂಡತಿ ಶಂಶಾದ್‌ನೊಂದಿಗಿನ ಪ್ರೀತಿಯ ಒಡನಾಟ ಮತ್ತವಳ ಸಾವು ನೆನಪಿಸಿಕೊಳ್ಳುವ ಹುಸೇನಸಾಬ ನಿವೃತ್ತಿಯ ಅಂಚಿಗೆ ತಲುಪಿದವನು. ಒಮ್ಮೆ ಸ್ಮೋಕಿಂಗ್ ಕೇಸ್ ಹಿಡಿಯಲು ಸಿನೆಮಾ ಥಿಯೇಟರ್‌ಗೆ ಹೋದಾಗ ಥಿಯೇಟರ್‌ನ ಕತ್ತಲೆಯಲ್ಲಿ ತನ್ನ ಮಗಳು 'ನೂರಿ' ಹುಡುಗನೊಬ್ಬನೊಂದಿಗೆ ಸರಸ ಸಲ್ಲಾಪದಲ್ಲಿ ತೊಡಗಿರುವುದನ್ನು ನೋಡಿ ವ್ಯಗ್ರನಾಗುತ್ತಾನೆ. ಅದಕ್ಕೆ ತನ್ನ ಹೆಂಡತಿಯ ಪ್ರೋತ್ಸಾಹವೂ ಇದೆ ಎಂದು ಗೊತ್ತಾದಾಗ ಮಾನಸಿಕ ಅಸ್ವಸ್ಥನಾಗುತ್ತಾನೆ. ನಿವೃತ್ತಿಯ ನಂತರ ಬದುಕು ಅಸಹನೀಯವಾಗುತ್ತದೆ. ಹೆಂಡತಿಯ ದುಷ್ಟತನ, ಮಕ್ಕಳ ಕಿರಿಕಿರಿ ಇವುಗಳಿಂದ ನೆಮ್ಮದಿ ಕಳೆದುಕೊಳ್ಳುತ್ತಾನೆ. ಕಥೆಯ ಅಂತ್ಯದಲ್ಲಿ ಹೆಂಗಸಿನ ಶವದ ಮಾಂಗಲ್ಯ ಕದ್ದು ಅದನ್ನು ದಕ್ಕಿಸಿಕೊಳ್ಳಲಾರದೇ ಸಾಯುತ್ತಾನೆ. ಕೆಳವರ್ಗದ ಮುಸ್ಲಿಂ ಕುಟುಂಬದ ಜೀವನವನ್ನು ಈ ಕಥೆಯ ಪಾತ್ರಗಳ ಮೂಲಕ, ಸಂಭಾಷಣೆಗಳ ಮೂಲಕ ಪರಿಣಾಮಕಾರಿಯಾಗಿ ಬೆಳಗೆರೆಯವರು ಚಿತ್ರಿಸಿದ್ದಾರೆ.

'ಮಸೀದಿ ಬಿದ್ದ ಮೂರನೇ ದಿನ' ಕಥೆಯ ಪ್ರಮುಖ ಪಾತ್ರ **'ಗುರುಸಾಂತ'**ನದು ಬಳ್ಳಾರಿಗೆ ಹದಿನೆಂಟು ಮೈಲು ದೂರದ ಅವುಟಾಳು ಎಂಬ ಉರಿ ಬಿಸಿಲ ಹಳ್ಳಿಯ ಎಸ್ಸೆಲ್ಸಿ ಫೇಲಾದ ಏಕೈಕ ವ್ಯಕ್ತಿ. ಇಡೀ ಊರು ಬರಗಾಲಕ್ಕೆ ಒಳಗಾದಾಗ ಉಪ್ಪಾರ ಅನುಮಂತಜ್ಜನ ಸಾಕು ಮಗಳು ಸಾವಿತ್ರಿ ಕುರುಬರ ಉರುಕುಂದಪ್ಪನ ಮಗ ಗುರುಸಾಂತನನ್ನು ಇಷ್ಟಪಟ್ಟು ತನ್ನ ಬಯಕೆ ಹೇಳಿಕೊಳ್ಳುತ್ತಾಳೆ. ಇದಕ್ಕೆ ಒಪ್ಪಿದ ಗುರುಸಾಂತ ಅವಳನ್ನು ಕರೆದುಕೊಂಡು ಬೆಂಗಳೂರಿಗೆ ಬರುತ್ತಾನೆ. ಅಲ್ಲಿ ಬಳ್ಳಾರಿ ಬಂಡಿ ಮೋಟಿನ ಅತ್ತಾರ್‌ಸಾಬು ಗುರುಸಾಂತನಿಗೆ ಇರಲು ಎಲ್ಲ ವ್ಯವಸ್ಥೆ ಮಾಡಿಕೊಟ್ಟು ಅವನಿಗೆ ಎಕ್ಸ್‌ಪರ್ಟ್ ಡಿಟೆಕ್ಟಿವ್ ಕಂಪನಿಯಲ್ಲಿ ಸೆಕ್ಯೂರಿಟಿ ಗಾರ್ಡ್ ಕೆಲಸ ಕೊಡಿಸುತ್ತಾನೆ. ಹದಿಮೂರು ಎಕರೆ ಬಯಲಿನಲ್ಲಿ ನಿಶ್ಚಲವಾಗಿ ನಿಂತ ಫ್ಯಾಕ್ಟರಿಯನ್ನು ಕಾಯುವ ಕೆಲಸ. ನಿರಂತರವಾಗಿ ರಾತ್ರಿಪಾಳಿ ಕೆಲಸ

ಮಾಡುವ ಗುರುಸಾಂತನಿಗೆ ನಿರ್ಜನ ರಾತ್ರಿಯ ನೀರವತೆಯಲ್ಲಿ ಅನುಮಾನ ಮಿಸುಕಾಡತೊಡಗುತ್ತದೆ. ತನ್ನ ಹೆಂಡತಿ ಸಾಯಿತ್ರಿಯೊಂದಿಗೆ ಅತ್ತಾರ್‌ಸಾಬು ಅನೈತಿಕ ಸಂಬಂಧ ಹೊಂದಿರಬಹುದೇ? ಎಂಬ ಆಲೋಚನೆಗಳು ಅವನನ್ನು ಕಾಡುತ್ತವೆ. ತನ್ನ ನಿರಂತರ ರಾತ್ರಿ ಪಾಳಿಯ ಡ್ಯೂಟಿ ಅತ್ತಾರ್‌ಸಾಬ್‌ನ ಹುನ್ನಾರಗಳೇ ಇರಬಹುದೆಂಬ ಅನುಮಾನ ಕಾಡಲಾರಂಭಿಸುತ್ತದೆ. ಈ ಕಥೆಯಲ್ಲಿ ಗುರುಸಾಂತನಷ್ಟೇ ಪ್ರಮುಖ ಪಾತ್ರ 'ಅತ್ತಾರ್‌ಸಾಬು'ನದು.

ಬಳ್ಳಾರಿಯ ಬಂಡಿಮೋಟಿನ **'ಅತ್ತಾರ್‌ಸಾಬು'** ಒಮ್ಮೆ ಬಳ್ಳಾರಿಯ ಅಂಗಡಿಯೊಂದರಲ್ಲಿ ಪರಿಚಯವಾಗುವ ಗುರುಸಾಂತನಿಗೆ ಬೆಂಗಳೂರಿನ ತನ್ನ ವಿಳಾಸ ಕೊಟ್ಟು 'ಬೆಂಗಳೂರಿಗೆ ಬಂದಾಗ ಬಾ' ಎನ್ನುತ್ತಾನೆ. ಅವುಟಾಳು ಗ್ರಾಮದಿಂದ ಸಾವಿತ್ರಿಯೊಡನೆ ಬರುವ ಗುರುಸಾಂತನಿಗೆ ಕುಡಿಯಲು ನೀರು ಎಂಬುದರಿಂದ ಹಿಡಿದು ವಾರದ ರೇಷನ್ ಚೀಟಿಯವರೆಗೆ ಎಲ್ಲವನ್ನು ಕೊಡಿಸುತ್ತಾನೆ. ಇರಲಿಕ್ಕೆ ಗುಡಿಸಲನ್ನು ಕೊಡಿಸುತ್ತಾನೆ. ತನ್ನ ಹೆಂಡತಿ ಜೈನಾಬಿಯೊಂದಿಗೆ ಸಾವಿತ್ರಿಯ ದೋಸ್ತಿ ಮಾಡಿಸುತ್ತಾನೆ. ತಾನು ಕೆಲಸ ಮಾಡುತ್ತಿದ್ದ ಕಂಪನಿಯಲ್ಲೇ ಗುರುಸಾಂತನಿಗೂ ಸೆಕ್ಯೂರಿಟಿ ಗಾರ್ಡ್ ಕೆಲಸ ಕೊಡಿಸುತ್ತಾನೆ. ಮಾತು ಒರಟಾದರೂ ಗುರುಸಾಂತನ ಪಾಲಿಗೆ ಅಣ್ಣನಂಥವನು. ಅಯೋಧ್ಯೆಯಲ್ಲಿ ಮಸೀದಿ ಕೆಡವಿದಾಗ ಮಸೀದಿಬಿದ್ದ ಮೂರನೇ ದಿನ ಬೆಳಿಗ್ಗೆ ಡ್ಯೂಟಿಗೆಂದು ಹೊರಟವನು ಗಲಭೆಯ ಉದ್ರಿಕ್ತತೆಯಲ್ಲಿ ಕೊಲೆಯಾಗಲ್ಪಡುತ್ತಾನೆ. ಹಿಂದೂ-ಮುಸ್ಲಿಂ ಅನೋನ್ಯತೆಯು ಈ ಕಥೆಯ ಗುರುಸಾಂತ ಮತ್ತು ಅತ್ತಾರ್‌ಸಾಬನ ಕುಟುಂಬಗಳ ಮೂಲಕ ಚಿತ್ರಣಗೊಂಡಿದೆ.

ಹೋಟೆಲು ಕಾರ್ಮಿಕರ ಮೇಲೆ ನಡೆಯುವ ಶೋಷಣೆಯ ಕರಾಳತೆಯನ್ನು ವಿವರಿಸುವ ಕಥೆ 'ದಾರಿ'. ಈ ಕಥೆಯ ಕಥಾನಾಯಕ ಹಾಗೂ ನಿರೂಪಕ ಹದಿನಾರು ವರ್ಷದ ಹೋಟೆಲು ಮಾಣಿ **'ಮಂಜ'**. ಮೊದಲು ಹಾಸನ ಗಾಯತ್ರಿ ಭವನದಲ್ಲಿ ಕೆಲಸ ಮಾಡುತ್ತಿರುತ್ತಾನೆ. ನಂತರ ಹುಬ್ಬಳ್ಳಿಯ ಸರಿತಾ ಹೋಟೆಲಿನಲ್ಲಿ ಮಾಣಿಯಾಗಿ ಕೆಲಸಕ್ಕೆ ಸೇರುತ್ತಾನೆ. ಇಲ್ಲಿ ಇವನಿಗೆ ಶಿವಶಂಕ್ರು ಆತ್ಮೀಯ ಮಿತ್ರನಾಗುತ್ತಾನೆ. ಹೋಟೆಲಿನ ಮ್ಯಾನೇಜರ ಪಟ್ಟಣಶೆಟ್ಟಿ ಹಾಗೂ ಹಳೆಯ ಮಾಣಿ ಪರಮೇಶಿಯರ ವಿಕೃತ ಸಲಿಂಗಕಾಮಕ್ಕೆ ಮಂಜ ಬಲಿಯಾಗುತ್ತಾನೆ. ಅವನ ಅಸಹಾಯಕತೆ ಆಕ್ರೋಶವಾಗಿ ಪರಿವರ್ತನೆಯಾಗುತ್ತದೆ. ಹೋಟೆಲಿನಲ್ಲಿ ನಡೆಯುವ ಕಾರ್ಮಿಕರ ಶೋಷಣೆಯ ವಿರುದ್ಧ ಹೋರಾಡುತ್ತಾನೆ.

'ದಾರಿ' ಕಥೆಯ ಇನ್ನೊಂದು ಮುಖ್ಯ ಪಾತ್ರ **'ಶಿವಶಂಕ್ರು'** ಇವನು ಮಂಜನ ಗೆಳೆಯ, ಹೋಟೆಲು ಮಾಣಿ. ದಾವಣಗೆರೆಯವನು ಹುಬ್ಬಳ್ಳಿಯ ಕಾಡಸಿದ್ದೇಶ್ವರ ಕಾಲೇಜಿನಲ್ಲಿ ಪ್ರಥಮ ವರ್ಷದ ಪಿ.ಯು.ಸಿ. ಓದುತ್ತಿರುತ್ತಾನೆ. ಬೆಳಿಗ್ಗೆ ಕಾಲೇಜು ಮುಗಿಸಿಕೊಂಡು ಮಧ್ಯಾಹ್ನದಿಂದ ಕೆಲಸ ಮಾಡುತ್ತಾನೆ. ಕುಳ್ಳಗಿನ ಬಲಿಷ್ಠ ದಪ್ಪ ಮೈ ಶಿವಶಂಕ್ರು ಒಳ್ಳೆಯ ಕಬಡ್ಡಿ ಆಟಗಾರ. ಹೋಟೆಲು ಮ್ಯಾನೇಜರ್ ಪಟ್ಟಣಶೆಟ್ಟಿ ಹಾಗೂ ಪರಮೇಶಿಯರ ವಿಕೃತ ಲೈಂಗಿಕ ದಾಳಿಗೆ ಈಡಾದ ಮಂಜನನ್ನು ಶುಶ್ರೂಶೆ ಮಾಡುತ್ತಾನೆ, ಸಂತೈಸುತ್ತಾನೆ. ಹೋಟೆಲು

ಕಾರ್ಮಿಕರನ್ನು ಸಂಘಟಿಸಿ ಅವರಲ್ಲಿ ಪ್ರತಿಭಟನೆಯ ಕಿಡಿ ಹೊತ್ತಿಸುತ್ತಾನೆ. ಇವನ ಎಲ್ಲಾ ಚಟುವಟಿಕೆಯ ಹಿಂದೆ ಇವನ ಮಾಸ್ತರು ಇರುತ್ತಾರೆ. ಹೋಟೆಲು ಮಾಲೀಕರ ಕಡೆಯ ಮಂತ್ರಿಯೊಬ್ಬರು ಇವನಿಗೆ ಓದಿಸಿ, ಕೆಲಸ ಕೊಡಿಸುವ ಆಮಿಷ ತೋರಿಸಿದಾಗ ಕಾರ್ಮಿಕರ ಹೋರಾಟದಿಂದ ವಿಮುಖಗೊಳ್ಳುತ್ತಾನೆ.

ಹೋಟೆಲು ಕಾರ್ಮಿಕರನ್ನು ತನ್ನ ವಿಕೃತ ಶೋಷಣೆಗೀಡು ಮಾಡುವ ದುಷ್ಟ ಶೋಷಕನ ಪಾತ್ರವಾಗಿ **'ಪಟ್ಟಣಶೆಟ್ಟಿ'** ಪಾತ್ರ 'ದಾರಿ' ಕಥೆಯಲ್ಲಿ ಚಿತ್ರಣಗೊಂಡಿದೆ. ಪಟ್ಟಣಶೆಟ್ಟಿ ಸವಿತಾ ಹೋಟೆಲಿನ ಮ್ಯಾನೇಜರ್ ಇದೇ ಹೋಟೆಲಿನಲ್ಲಿ ಈ ಹಿಂದೆ ಸಪ್ಲೈಯರ್ ಆಗಿದ್ದವನು. ವಿಕೃತ ಸಲಿಂಗ ಕಾಮಿಯಾದ ಇವನ ಸಲಿಂಗಿ ಸ್ನೇಹಿತ ಅದೇ ಹೋಟೆಲಿನ ಹಳೆಯ ಮಾಣಿ ಪರಮೇಶಿ. ಹೋಟೆಲಿಗೆ ಹೊಸದಾಗಿ ಕೆಲಸಕ್ಕೆ ಸೇರುವ ಕಾರ್ಮಿಕರನ್ನು ತನ್ನ ವಿಕೃತ ಲೈಂಗಿಕತೆಗೆ ಬಲವಂತವಾಗಿ ಬಳಸಿಕೊಳ್ಳುತ್ತಾನೆ. ಹೋಟೆಲಿನ ಮಾಲಿಕ ಗಜಾನನ ಭಟ್ಟನ ಹೆಂಡತಿ ಆರು ಮಕ್ಕಳ ತಾಯಿಯಾಗಿ ಸದಾ ನರಳುವ ಕ್ಷಯರೋಗ ಪೀಡಿತೆ. ಗಜಾನನ ಭಟ್ಟನ ತಂದೆ ಮುಕುಂದ ಭಟ್ಟ ಹನ್ನೆರಡು ವರ್ಷಗಳ ಹಿಂದೆಯೇ ಹೆಂಡತಿಯನ್ನು ಕಳೆದುಕೊಂಡವನು. ಹೀಗಾಗಿ ತಂದೆ-ಮಗ ಇಬ್ಬರೂ ಪಟ್ಟಣಶೆಟ್ಟಿಯ ಹೆಂಡತಿಯೊಂದಿಗೆ ಅಕ್ರಮ ಸಂಬಂಧವನ್ನಿಟ್ಟುಕೊಂಡಿರುತ್ತಾರೆ. ಇವೆಲ್ಲಾ ಗೊತ್ತಿದ್ದೂ ಪಟ್ಟಣಶೆಟ್ಟಿ ಮೌನಿಯಾಗಿರುತ್ತಾನೆ.

ತೊನ್ನಿನಿಂದ ಬಳಲುವ ವ್ಯಕ್ತಿಯ ಮಾನಸಿಕ ವೇದನೆಯನ್ನು ಬಿಚ್ಚಿಡುವ ಕಥೆ 'ಬದುಕೊಂದು ಸತತ ಅಭ್ಯಾಸ' ಈ ಕಥೆಯ ಕಥಾನಾಯಕ ಹಾಗೂ ನಿರೂಪಕ **'ರಾಜ್'**. ಇಬ್ಬರು ಅಣ್ಣಂದಿರು ಅತ್ತಿಗೆಯರ ನಡುವೆ ಪ್ರೀತಿಯಿಂದ ಬೆಳೆದವನು. ಇತಿಹಾಸದಲ್ಲಿ ಎಂ.ಎ. ಪದವಿ ಪಡೆದ ರಾಜ್‌ನಿಗೆ ಸುಷ್ಮಾ ಪ್ರೇಯಸಿ. ಬೆನ್ನ ಮೇಲೆ ತೊನ್ನು ಕಾಣಿಸಿಕೊಂಡು ರಾಜ್‌ನ ದೇಹಾದ್ಯಾಂತ ಬೆಳೆಯಲಾರಂಭಿಸುತ್ತದೆ. ಇದರಿಂದಾಗಿ ಇವನು ಸುಷ್ಮಾ ದೂರಾಗುತ್ತಾಳೆ. ಇವನೊಂದಿಗೆ ಮನೆಯವರ ಅಂತರ ಕ್ರಮೇಣ ಹೆಚ್ಚಾಗುತ್ತಾ ಹೋಗುತ್ತದೆ. ಇದರಿಂದ ಅಂತರ್ಮುಖಿಯಾಗತೊಡಗಿದ್ದ ರಾಜ್‌ನಿಗೆ ಕೆ.ಇ.ಬಿ. ಆಫೀಸ್ ಜೋಗಕ್ಕೆ ವರ್ಗಾಯಿಸುತ್ತದೆ. ಹೊಸ ವಾತಾವರಣ ರಾಜ್‌ನ ಬದುಕಿನಲ್ಲಿ ನೆಮ್ಮದಿ, ಸಂತೋಷವನ್ನು ತರುತ್ತದೆ. ಇಲ್ಲಿ ಇವನ ಒಂಟಿತನಕ್ಕೆ ಹೊಸ ತಿರುವನ್ನು, ಸ್ಫೂರ್ತಿಯನ್ನು ಸುಷ್ಮಾಳ ಗೆಳತಿ ವೀಣಾ ಕೊಡುತ್ತಾಳೆ. ಇವಳ ಗಂಡ ಪ್ರೊಫೆಸರ್ ರಾವ್ ಹೃದಯಾಘಾತದಿಂದ ಮರಣಿಸಿದ ನಂತರ ಪತಿಯ ನೆನಪಿನಲ್ಲೇ ಜೀವನ ಕಳೆಯುತ್ತಾಳೆ. ಬದುಕಿನಲ್ಲಿ ಜೊತೆಯಾಗಿ ಬಾಳಲು ರಾಜ್ ಕೈ ಚಾಚಿದರೂ ನಯವಾಗಿಯೇ ಅದನ್ನು ನಿರಾಕರಿಸುತ್ತಾಳೆ. ಈ ಕಥೆಯಲ್ಲಿ ರಾಜ್ ಮತ್ತು ವೀಣಾ ಪಾತ್ರಗಳೇ ಪ್ರಾಮುಖ್ಯತೆಯನ್ನು ಪಡೆದಿವೆ.

ಹುಡುಗಿಯೊಬ್ಬಳು ಹದ್ದಾಗಿ ಪರಿವರ್ತನೆಯಾಗುವ ವಸ್ತುವನ್ನೊಳಗೊಂಡ ಕಥೆ 'ವಂಧ್ಯಾ'. ಈ ಕಥೆಯ ಮುಖ್ಯ ಪಾತ್ರ **'ಪೂರ್ಣಮ್ಮ' (ಪೂರ್ಣಿ)**ನದು. ಕರಿಗೆರೆಯ ಬ್ರಾಹ್ಮಣ ಮನೆಯ ಪೂರ್ಣಮ್ಮ ಹದ್ದುಗಳೊಂದಿಗೆ ಸಂಭಾಷಣೆ ನಡೆಸಿ ಅವುಗಳೊಂದಿಗೆ ಸ್ನೇಹ

ಸಂಪಾದಿಸುತ್ತಾಳೆ. ಕ್ರಮೇಣ ರೆಕ್ಕೆ ಮೂಡಿ ಹದ್ದಾಗಿ ಪರಿವರ್ತನೆಯಾಗುತ್ತಾಳೆ. ಹಂತ ಹಂತವಾಗಿ ಹದ್ದಾಗುವ ಪ್ರಕ್ರಿಯೆಯನ್ನು ವಾಸ್ತವವೇನೋ ಎಂಬಂತೆ ನೈಜವಾಗಿ ರವಿಯವರು ಚಿತ್ರಿಸಿದ್ದಾರೆ. ಸಂಪೂರ್ಣವಾಗಿ ಹದ್ದಾಗುವ ಪೂರ್ಣಿ ಇತರ ಹದ್ದುಗಳೊಂದಿಗೆ ಮನೆ ಬಿಟ್ಟು ಹಾರಿ ಹೋಗುತ್ತಾಳೆ. ನಂತರ ಇಡೀ ಕರಿಗೆರೆ ಭಯಾನಕ ಬರಗಾಲಕ್ಕೆ ತುತ್ತಾಗುತ್ತದೆ. ದನಗಳ ಹೆಣಗಳ ರಾಶಿ ಬೀಳುತ್ತದೆ. ದನಗಳ ಮಾಂಸ ಹದ್ದುಗಳಿಗೆ ಆಹಾರವಾಗಿ ಅದೂ ಖಾಲಿಯಾದಾಗ, ಸಾಯುವ ಸ್ಥಿತಿಯಲ್ಲಿದ್ದ ತನ್ನ ತಮ್ಮ ಗೋಪಿಯನ್ನು ತಿನ್ನಲು ಜೊತೆಗಾರ ಹದ್ದುಗಳೊಂದಿಗೆ ಪೂರ್ಣಿ ಮನೆಗೆ ಬರುತ್ತಾಳೆ. ಹೀಗೆ ರಕ್ತ ಹೆಪ್ಪುಗಟ್ಟಿಸುವಂಥ ಪಾತ್ರವಾಗಿ ಪೂರ್ಣಿಯ ಪಾತ್ರ ಮೂಡಿಬಂದಿದೆ. ಈ ಕಥೆಯಲ್ಲಿ ಪೂರ್ಣಿಯೇ ಕಥಾ ನಿರೂಪಕಿ.

'ಹೀಗೊಬ್ಬಳು ಸೀತಾದೇವಿ' ಕಥೆಯ ಮುಖ್ಯ ಪಾತ್ರ **'ಸೀತಾದೇವಿ',** ಕಾಲೇಜಿನಲ್ಲಿ ಪರಮ ಸುಂದರಿ, ಶ್ರೀಮಂತೆ, ಜನಪ್ರಿಯತೆಯನ್ನು ಗಳಿಸಿಕೊಂಡವಳು. ಇವಳಿಗೊಬ್ಬ ಪ್ರಿಯತಮ ಅವಿನಾಶ್ ರೆಡ್ಡಿ. ಪ್ರತಿ ಸಂಜೆ ಅವನೊಂದಿಗೆ ಬೈಕ್‌ನಲ್ಲಿ ಸುತ್ತಾಡುತ್ತಿರುತ್ತಾಳೆ. ಸಂಜೆಯ ತಿರುಗಾಟವನ್ನು ತನ್ನ ಹಾಸ್ಟೆಲ್‌ನ ರೂಂ ಮೇಟ್ ಅಪರ್ಣಾಳಿಗೆ ಅಚ್ಚರಿಯಿಂದ ವಿವರಿಸುತ್ತಾಳೆ. ಬೇಗ ಮುನಿಸಿಕೊಳ್ಳುವ ಸ್ವಭಾವದ ಸೀತಾದೇವಿ ಒಲಿಸಿಕೊಳ್ಳುವವರಿಲ್ಲದಿದ್ದರೆ ತನ್ನ ಮೇಲೆ ತಾನೇ ರೇಗುತ್ತಾಳೆ. ಊಟ ಬಿಡುತ್ತಾಳೆ. ಹಾಸ್ಟೆಲಿನ ಹುಡುಗಿಯರೊಂದಿಗೆ ಜಗಳವಾಡುತ್ತಾಳೆ. ಮುಕೇಶನ ಹಾಡು ಹಾಡತೊಡಗುತ್ತಾಳೆ. ತುಂಬಾ ಉಸಿರು ಕಟ್ಟಿಸುವಷ್ಟು ಪ್ರೀತಿಸುವ, ಅತಿಯಾದ ಅನುಮಾನ ಸ್ವಭಾವದ ಸೀತಾದೇವಿ ಅದೇ ಕಾರಣಕ್ಕೆ ತನ್ನ ಪ್ರಿಯತಮ ಅವಿನಾಶ್ ರೆಡ್ಡಿಯನ್ನು ಕಳೆದುಕೊಳ್ಳುತ್ತಾಳೆ. ಹೆಣ್ಣಿನ ಅತಿಯಾದ ಪೊಸೆಸಿವ್ ನೆಸ್ ಪ್ರೀತಿ, ವಿನಾಕಾರಣ ಸಂಶಯ ಪಡುವ ಸ್ವಭಾವ ಇವುಗಳನ್ನೆಲ್ಲಾ ಸೀತಾದೇವಿ ಪಾತ್ರದ ಮೂಲಕ ರವಿ ಚಿತ್ರಿಸಿದ್ದಾರೆ. ಈ ಕಥೆಯ ಇನ್ನೊಂದು ಮುಖ್ಯ ಪಾತ್ರ 'ಅರ್ಪಣಾ'ಳದ್ದು.

**'ಅಪರ್ಣಾ'** ಕಥೆಯ ನಿರೂಪಕಿಯಾಗಿ ಕಥೆಯನ್ನು ನಿರೂಪಿಸುತ್ತಾ ಹೋಗುತ್ತಾಳೆ. ಹಾಸ್ಟೆಲ್‌ನಲ್ಲಿ ವಾಸಿಸುವ ಅಪರ್ಣಾಳ ರೂಂ ಮೇಟ್ ಸೀತಾದೇವಿ. ಅಪರ್ಣಾಳಿಗೆ ಜ್ವರ ಬಂದಾಗ ಸೀತಾದೇವಿ ಅತಿಯಾಗಿ ಉಪಚರಿಸುತ್ತಾಳೆ. ಸೀತಾದೇವಿಯನ್ನು ಇಷ್ಟಪಡುವ ಅಪರ್ಣಾಳಿಗೆ ಕಾಫಿ, ಕತ್ತಲು, ಏಕಾಂತ ಮತ್ತು ಸಂಗೀತವನ್ನು ಪ್ರೀತಿಸುತ್ತಾಳೆ. ತನ್ನ ಪ್ರೀತಿಯನ್ನು ಕಳೆದುಕೊಂಡು ಪರಿತಪಿಸುವ ಸೀತಾದೇವಿಗೆ ಸಂತೈಸಿ ಅವರಿಬ್ಬರ ನಡುವೆ ರಾಜಿ ಮಾಡಿಸಲು ಪ್ರಯತ್ನಿಸುತ್ತಾಳೆ. ತನ್ನ ಬಗ್ಗೆಯೇ ಸುಳ್ಳು ವದಂತಿಗಳನ್ನು ಹಬ್ಬಿಸುವುದನ್ನು ಅವಿನಾಶ್ ರೆಡ್ಡಿಯಿಂದ ತಿಳಿಯುವ ಅಪರ್ಣಾ ಬದಲಾಗದ ಸೀತೆಯ ಸ್ವಭಾವ ಕಂಡು ಸುಮ್ಮನಾಗುತ್ತಾಳೆ.

ಸರ್ಕಾರಿ ಆಸ್ಪತ್ರೆಯಲ್ಲಿ ಹೆಣ ಕೊಯ್ಯುವ **'ನಾರಾಣಿ'**ಯೇ 'ಹೆಣದ ಮನೆಯಲ್ಲಿ' ಕಥೆಯ ಪ್ರಮುಖ ಪಾತ್ರ, ಕಳೆದ ಹದಿನೈದು ವರ್ಷಗಳಿಂದ ಹೆಣ ಕೊಯ್ಯುವುದನ್ನೇ ವೃತ್ತಿಯನ್ನು ಮಾಡಿಕೊಂಡ ನಾರಾಣಿಗೆ ಸಡಗರ, ಕುತೂಹಲ, ಭಯ, ವೇದನೆ ಇವ್ಯಾವೂ ಇಲ್ಲ. ಇವೆಲ್ಲವನ್ನು ಈ ಹದಿನೈದು ವರ್ಷಗಳ ಬದುಕು ಕೊಂದು ಹಾಕಿದೆ. ತನ್ನ ನಾರುವ

ಗಾಯಗಳಿಗೆ ಹಚ್ಚಿಕೊಳ್ಳುವ ಬಿಳೀ ಪೌಡರು, ಹರಿದ ಜಮಖಾನಾ, ಮುರಿದ ದಿಂಬು ಮತ್ತು ರಾಘವೇಂದ್ರ ಸ್ವಾಮಿಯ ಫೋಟೋ ಇವಿಷ್ಟೇ ಇವನ ಆಸ್ತಿ. ಹದಿನೈದು ವರ್ಷಗಳ ಹಿಂದೆ ಹೆಂಡತಿಯನ್ನು ಕಳೆದುಕೊಂಡವನು. ಹೆಂಡತಿಯ ಪೋಸ್ಟ್‌ಮಾರ್ಟಂ ಮಾಡುವಾಗ 'ನನ್ಹೆಂಡ್ತಿನ ತುಂಡು ಮಾಡಬ್ಯಾಡ್ರಣ್ಣಾ... ನಿಮ್ಮ ಕಾಲಿಗೆ ಬೂಳ್ತೀನ್ರಣ್ಣಾ' ಎಂದರಚಿದ್ದ. ಈಗ ಅವೆಲ್ಲಾ ಕೇವಲ ನೆನಪುಗಳು. ಪಕ್ಕದ ಕೋಣೆಯಲ್ಲಿ ಹೆಣವಿದ್ದರೆ ನಾರಾಣಿಗೆ ನಿದ್ದೆ ಬರುವುದಿಲ್ಲ. ಒಂದಿಷ್ಟು ಸಾರಾಯಿ ಕುಡಿದುಕೊಂಡು ಬಂದು ಅದರೆದುರು ಕೂತು 'ಎಲ್ಲಿ ಉಟ್ಟಿದ್ಯೋ, ಎಂಗ ಸತ್ತ್ಯೋ, ನನ್ ಮುಂದೆ ಬಂದು ಮಕ್ಕಂಡೀಯ... ಆಂ, ನಿನ ಮುಂಜಾಳಾಗ' ಎಂದು ಹೆಣದೊಂದಿಗೆ ಮಾತಾಡುತ್ತಾನೆ. ತನ್ನ ಡಾಕ್ಟರ್ ಕೆಂಚಪ್ಪನ ಆದೇಶದಂತೆ ಹೆಣ ಕೊಯ್ಯುವ ನಾರಾಣಿಯದು ಪಳಗಿದ ಕೈ. ಹೆಣ ಕೊಯ್ದ ನಂತರ ಚೆಲ್ಲಿಬಿದ್ದ ನರ, ಕರುಳು, ತಲೆ ಚಿಪ್ಪಿನಿಂದ ಹೊರಚೆಲ್ಲಿದ ಮಿದುಳನ್ನು, ಮಾಂಸದ ತುಣುಕಗಳನ್ನು ಕುಪ್ಪೆಮಾಡಿ ಹೆಣದ ಹೊಟ್ಟೆಯ ದೊಗರಿನೊಳಗೆ ಹಾಕಿ ಹೊಲಿಯುತ್ತಾನೆ. ತನಗೆ ಅಶ್ಲೀಲ ಬೈಯ್ಗಳನ್ನು ಬೈಯ್ಯುವ ಡಾಕ್ಟರ್‌ನ ಮೇಲೆ ಆಕ್ರೋಶಗೊಳ್ಳುವ ನಾರಾಣಿ, ಡಾಕ್ಟರ್‌ಗೆ ಅಪಘಾತವಾಗಿದೆ ಎಂದು ತಿಳಿದಾಗ ಕಳವಳಗೊಳ್ಳುತ್ತಾನೆ. ಆದರೆ ಡಾಕ್ಟರ್‌ನ ಶವವನ್ನೇ ತಾನು ಕೊಯ್ಯಬೇಕಾದ ಪ್ರಸಂಗ ಕಥೆಯ ಅಂತ್ಯದಲ್ಲಿ ನಾರಾಣಿಗೆ ಬಂದೊಗುತ್ತದೆ. ಈ ಕಥೆಯ ಇನ್ನೊಂದು ಪಾತ್ರ 'ಡಾಕ್ಟರ್ ಕೆಂಚಪ್ಪ'.

ಮಾನವೀಯತೆಯನ್ನೇ ಮರೆತ ಲಂಚಕೋರ ಡಾಕ್ಟರ್‌ನ ಪಾತ್ರವಾಗಿ **'ಡಾಕ್ಟರ್ ಕೆಂಚಪ್ಪ'**ನ ಪಾತ್ರ ಚಿತ್ರಣಗೊಂಡಿದೆ. ಪ್ರತಿ ಪೋಸ್ಟ್‌ಮಾರ್ಟಂಗೂ ಹೆಣದ ವಾರಸ್ದಾರರ ಹತ್ತಿರ ಹಣಕೇಳುವ ಡಾ. ಕೆಂಚಪ್ಪನಿಗೆ ಕರುಣೆ, ಅಂತಃಕರಣಗಳನ್ನು ಮರೆತವನು. ಹೆಣದ ಹಣ ಸಿಗದಿದ್ದರೆ ಮುಂಜಾನೆ ಬಂದ ಹೆಣವನ್ನು ಮರು ಮುಂಜಾನೆ ತನಕ ಮುಟ್ಟುವುದಿಲ್ಲ. ಹಾಗಾಗಿಯೇ ಜನ 'ಡಾಕ್ಟ್ರು ಕೆಂಚಪ್ಪ ಅಂದ್ರೆ ಹೆಣದ ಮ್ಯಾಗಿನ ರೊಕ್ಕ ತಿಂಬೋನು' ಅನ್ನುತ್ತಾರೆ. ಪುಟ್ಟ ಮಗುವಿನ ಶವದ ಪೋಸ್ಟ್‌ಮಾರ್ಟಂಗೂ ಆ ಮಗುವಿನ ತಂದೆಯ ಹತ್ತಿರ ಹಣ ಕೀಳುವ ಡಾಕ್ಟರ್ ಅವಸರವಾಗಿ ಪೋಸ್ಟ್‌ಮಾರ್ಟಂ ಮುಗಿಸಿ ಸಿನೆಮಾಕ್ಕೆ ಹೊರಡುವ ಆತುರ ತೋರಿಸುತ್ತಾನೆ. ಸಿನೆಮಾ ನೋಡಿ ತನ್ನ ಸ್ಕೂಟರಿನಲ್ಲಿ ಹಿಂತಿರುಗುವಾಗ ಎದುರಿಗೆ ಬರುವ ಲಾರಿಯೊಂದಕ್ಕೆ ಡಿಕ್ಕಿ ಹೊಡೆದು ಸಾಯುತ್ತಾನೆ. ಈ ಕಥೆಯಲ್ಲಿ ಸರ್ಕಾರಿ ಆಸ್ಪತ್ರೆಯ ಅವ್ಯವಸ್ಥೆ ಕೂಡಾ ನೈಜತೆಗೆ ತುಂಬಾ ಹತ್ತಿರವಾಗಿ ಚಿತ್ರಣಗೊಂಡಿದೆ.

ಗಂಡೂ ಅಲ್ಲದ, ಹೆಣ್ಣೂ ಅಲ್ಲದ **'ಭ್ರೂಣ'** ಕೂಡಾ ಒಂದು ವಿಶಿಷ್ಟ ಪಾತ್ರವಾಗಿ 'ಭ್ರೂಣ ಸಂಭಾಷಣೆ' ಕಥೆಯಲ್ಲಿ ಹೊರಹೊಮ್ಮಿದೆ. ಬಹುಶಃ ರವಿಯವರು ಸೃಷ್ಟಿಸಿದ ಪಾತ್ರಗಳಲ್ಲೇ ಇದು ತುಂಬಾ ವಿಭಿನ್ನವಾದುದು. ಇದು ರವಿಯವರ ಸೃಜನಶೀಲತೆಯ ಪರಾಕಾಷ್ಠೆ ಎನ್ನುವರಷ್ಟರ ಮಟ್ಟಿಗೆ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಅಮೀನಾಳ ಗರ್ಭದ ಒಳಗಿನ ಭ್ರೂಣದ ಸೃಷ್ಟಿಕರ್ತ ಕಬ್ಬಿಣದ ಬಳೆತೊಟ್ಟ ಫಕೀರ. ಅವನ ವರದಿಂದಲೇ ಭ್ರೂಣ ತನ್ನ ತಾಯಿ ಅಮೀನಾಳೊಂದಿಗೆ ಸಂಭಾಷಿಸುತ್ತದೆ. ಅಮೀನಾಳ ಗೆಳತಿ ವಸಂತಳ

ಮುಚ್ಚಿಟ್ಟ ಗುಪ್ತ ಬಯಕೆಗಳನ್ನು ತೆರೆದಿಡುತ್ತದೆ. ಎಪ್ಪತ್ತು ವರ್ಷಗಳ ಹಿಂದೆ ಆಡಾಡುತ್ತ ಸತ್ತ ಆರು ವರ್ಷದ ಕಂದ ಇರ್ಫಾನ ಗೋರಿ, ಆ ಗೋರಿಯೊಳಗಿನ ಅಗೋಚರ ಇರ್ಫಾನನೊಂದಿಗೆ ಭ್ರೂಣ ಸಂಭಾಷಿಸುತ್ತದೆ. ವಸಂತಳ ಗರ್ಭದ ಒಳಗಿನ ಮಗುವಿನ ಸ್ಥಿತಿ ಹೇಳುತ್ತದೆ. ತಾಯಿಯ ಹೊಟ್ಟೆಯೊಳಗಿನ ಭ್ರೂಣದ ಕದಲಿಕೆಗಳನ್ನು ನೈಜವಾಗಿ ಕಥೆಯಲ್ಲಿ ಚಿತ್ರಣಗೊಂಡಿದೆ.

ಉದಾ: 'ಅವಳ ಭ್ರೂಣ ತಟಪಟನೆ ಕುಣಿದು, ಕುಪ್ಪಳಿಸಿ, ಹೊಕ್ಕಳ ಬಳ್ಳಿ ಹಿಡಿದುಕೊಂಡು ಜೀಕಿ, ಜೀರುಂಡೆಯಾಗಿ, ಲಗಾಟಿ ಹೊಡೆದು, ಚಳ್ಳಂತ ಉಚ್ಚೆಮಾಡಿ ಆನಂದದಿಂದ ಬೆಟ್ಟು ಚೀಪತೊಡಗಿತ್ತು.'[೧]

'ಅಮೀನಾಳ ಭ್ರೂಣ ಅಮ್ಮನ ಹೊಕ್ಕಳು ಬಳ್ಳಿ ಹಿಡಿದು ಪೂರ್ವದಿಂದ ಪಶ್ಚಿಮಕ್ಕೆ ಜುಯ್ಯುಂತ ಜೀಕಿ, ಚಪ್ಪಳೆ ತಟ್ಟಿ ಕಿಲಕಿಲಾಂತ ನಕ್ಕಿತು'[೨]

ಈ ವಾಕ್ಯಗಳೇ ಸಾಕು, ಓದುಗರ ಕಣ್ಮುಂದೆ ಭ್ರೂಣದ ಕದಲಿಕೆಗಳ ಚಿತ್ರಣವನ್ನು ಮೂಡಿಸುತ್ತದೆ. ಭ್ರೂಣ ಹಾಗೂ ಅಮೀನಾ ಪಾತ್ರಗಳ ಮೂಲಕ ತಾಯ್ತನದ ಚಿತ್ರಣವನ್ನು ಈ ಕಥೆಯಲ್ಲಿ ಕಾಣಬಹುದು. 'ಅಮೀನಾ'ಳ ಪಾತ್ರವೂ ಇಲ್ಲಿ ಓದುಗರ ಗಮನ ಸೆಳೆಯುತ್ತದೆ.

**'ಅಮೀನಾ'** ಏಳು ತಿಂಗಳ ಗರ್ಭಿಣಿ. ಅವಳ ಗರ್ಭದೊಳಗಿನ ಭ್ರೂಣ ಅವಳೊಂದಿಗೆ ಮಾತನಾಡುತ್ತದೆ. ಒಂದು ಮಧ್ಯಾಹ್ನ ಹಸಿದುಕೊಂಡು ಮನೆಗೆ ಬರುವ ಕಬ್ಬಿಣದ ಬಳೆ, ಸರಪಳಿ ತೊಟ್ಟ ಫಕೀರನಿಗೆ ಊಟ ಬಡಿಸುತ್ತಾಳೆ. ಉಂಡ ನಂತರ ಅವಳ ದೇಹ ಬಯಸುವ ಫಕೀರನಿಗೆ ಅದನ್ನು ಧಾರೆ ಎರೆದು ನನಗೆ ಮಗು ಬೇಕು ಎಂದು ಕೇಳಿಕೊಳ್ಳುತ್ತಾಳೆ. ಆಗ ಸೃಷ್ಟಿಯಾದುದ್ದೇ ಈ ಭ್ರೂಣ. ಅಮೀನಾಳ ಗರ್ಭಕ್ಕೆ ನಾಲ್ಕು ತಿಂಗಳು ತುಂಬಿದಾಗ ಬರುವ ಫಕೀರನಿಗೆ 'ನೀನು ಯಾಕೆ ಹೋಗುತ್ತಿಯಾ? ನೀನು ಹೋದ ಮೇಲೆ ನಾನು ಯಾರೊಂದಿಗೆ ಮಾತಾಡಲಿ ಎಂದು ಕೇಳುವ ಅಮೀನಾಳಿಗೆ 'ನಿನ್ನ ಕೂಸಿನೊಂದಿಗೆ ಮಾತಾಡು' ಎಂದು ಹೇಳಿ ಹೊರಟು ಹೋಗುತ್ತಾನೆ. 'ಅಮ್ಮಿಜಾನ್' ಎಂದು ಕೂಗಿಕೊಳ್ಳುವ ಭ್ರೂಣ ಅವಳೊಂದಿಗೆ ನಿರಂತರವಾಗಿ ಸಂಭಾಷಣೆ ನಡೆಸುತ್ತದೆ. ಅಲೆಮಾರಿಯಾಗಿ ತಿರುಗುವ ಫಕೀರ ಕಥೆಯ ಅಂತ್ಯದಲ್ಲಿ ಮತ್ತೆ ಅಮೀನಾಳನ್ನು ಸಂಧಿಸುತ್ತಾನೆ. ಹೆಂಗಸಿನ ಪ್ರೀತಿಯ ಸ್ವರೂಪ, ತಾಯ್ತನದ ಚಿತ್ರಣ ಇವೆಲ್ಲವೂ ಅಮೀನಾಳ ಪಾತ್ರದ ಮೂಲಕ ವ್ಯಕ್ತವಾಗಿದೆ.

ಉದಾ: ಏಳು ತಿಂಗಳ ಗರ್ಭಿಣಿಯಾಗಿರುವ ತನ್ನ ಗೆಳತಿ ವಸಂತಳಿಗೆ ಅಮೀನಾ ಹೇಳುವ ಮಾತುಗಳು... 'ಮೆಲ್ಲಕ್ಕೆ ಹೋಗು ವಸಂತಾ... ಮಳೆ ಬರುವ ಹಾಗಿದೆ. ತೊಯ್ದರೆ ಮೈ ತೊಯ್ಯಲಿ. ಒಳಗಿನ ಕಂದ ಬೆಚ್ಚಗಿರಬೇಕು. ಅದು ಮುಖ್ಯ. ಹೋಗುವ ದಾರಿಯಲ್ಲಿ ಒಬ್ಬಳೇ ನಿಂತು ನಿನ್ನೊಳಗಿನ ಜೀವಕ್ಕೆ ಹಾಯೆನ್ನುವಂತೆ ಒಂದು ಹಾಡು ಕೇಳಿಸು. ಪ್ರೀತಿಯಿಂದ ಒಂದು ಮಾತನಾಡಿಸು. ನಿನ್ನೊಳಗೊಂದು ಜೋಗುಳ ಮೂಡಲಿ. ಎರಡು ತಿಂಗಳಾಚೆ ನಿನ್ನ ತೊಟ್ಟಿಲು ತುಂಬುತ್ತದೆ. ಹೋಗಿ ಬಾ ಬೆಹನ್'[೩] ಎಂಬ ಮಾತುಗಳು ಅವಳ ತಾಯ್ತನದ ಪ್ರೀತಿ ವಾತ್ಸಲ್ಯವನ್ನು ಹೊರ ಸೂಸುತ್ತವೆ.

ಹೆಂಡತಿಯ ಪ್ರೀತಿ ಹಾಗೂ ತಾಯಿಯ ಪ್ರೀತಿ ಇವೆರಡು ನಡುವೆ ತೊಳಲಾಡುವ **'ಅನಂತರಾಮು'**, 'ನೆರಳು' ಕಥೆಯ ಕಥಾನಾಯಕ ಮತ್ತು ಕಥೆಯ ನಿರೂಪಕ. ಫ್ಯಾಕ್ಟರಿಯೊಂದರಲ್ಲಿ ಕೆಲಸ ಮಾಡುವ ಅನಂತರಾಮು ಪುಟ್ಟದಾದ ಬಾಡಿಗೆ ಮನೆಯೊಂದರಲ್ಲಿ ತನ್ನ ಹೆಂಡತಿ ಜ್ಯೋತಿಯೊಂದಿಗೆ ವಾಸಿಸುತ್ತಾನೆ. ಅನಂತರಾಮುವಿನ ಮುದಿ ತಾಯಿಗೆ ಸದಾ ಏನಾದರೊಂದು ಕದಿಯುವ ರೋಗ. ಇದರಿಂದ ಸದಾ ಮುಜುಗರ, ಅವಮಾನಕ್ಕೀಡಾಗುತ್ತಾನೆ. ಬೇಸಿಗೆ ಕಾಲದಲ್ಲಿ ಹೊರಗೆ ಮಲಗುವ ತಾಯಿ ಚಳಿಗಾಲದಲ್ಲಿ ಆ ಪುಟ್ಟ ಮನೆಯಲ್ಲಯೇ ಮಲಗುತ್ತಾಳೆ. ಇದರಿಂದ ಅನಂತರಾಮು ಮತ್ತವನ ಹೆಂಡತಿ ಜ್ಯೋತಿಯ ಸುಖದ ರಾತ್ರಿಗಳು ದೂರಾಗುತ್ತವೆ. ಮಲಗಲಿಕ್ಕೆ ಪ್ರತ್ಯೇಕವಾದ ಕೋಣೆಯು ಇಲ್ಲದೇ ದೈಹಿಕ ಸುಖಕ್ಕಾಗಿ ದಂಪತಿಗಳು ಚಡಪಡಿಸುತ್ತಾರೆ. ಒಮ್ಮೆ ಯಾರೋ ಕೊಟ್ಟ ಸ್ವೆಟರನ್ನು ತರುವ ತಾಯಿ ಅದನ್ನು ಕದ್ದು ತಂದಿದ್ದಾಳೆಂಬ ಸಿಟ್ಟು ಜ್ಯೋತಿಗೆ ಬರುತ್ತದೆ. ಜೊತೆಗೆ ರಾತ್ರಿಯ ಅಸಹನೆಯು ಸೇರಿ ಆಕೆಗೆ ಹೊಡೆಯುತ್ತಾಳೆ. ಇದರಿಂದ ಆಕ್ರೋಶಗೊಳ್ಳುವ ತಾಯಿ ತನ್ನ ಮಗನ ಮನೆಗೆ ಶಪಿಸಿ ಗುಡಿಯೊಂದರಲ್ಲಿ ವಾಸ ಮಾಡಲಾರಂಭಿಸುತ್ತಾಳೆ. ಹೆಂಡತಿಯೊಂದಿಗಿನ ಸುಖದ ನಿರೀಕ್ಷೆಯಲ್ಲಿದ್ದ ಅನಂತರಾಮುವಿಗೆ ತಾಯಿಯ ಅಗಲಿಕೆಯ ನೋವಿನ ಅರಿವು ಆಗುವುದಿಲ್ಲ. ನಂತರ ಗುಡಿಯಲ್ಲಿಯೇ ಅನಂತನ ತಾಯಿ ಸಾಯುತ್ತಾಳೆ. ಕೊನೆಗೆ ಅನಂತರಾಮು ತನ್ನ ತಾಯಿಯ ಶವವನ್ನು ನೋಡಿ ಭಾರವಾದ ಅನುಭವ ಉಂಟಾಗುತ್ತದೆ. ಅನಂತರಾಮುವಿನ ತಾಯಿಯ ಕೊನೆಯ ದಿನಗಳ ನಿಸ್ಸಹಾಯಕತೆ ಓದುಗರಲ್ಲಿ ಆರ್ದ್ರತೆಯನ್ನು ಸ್ಫುರಿಸುತ್ತದೆ.

ರವಿ ಬೆಳಗೆರೆಯವರು ತಮ್ಮನ್ನು ತಾವೇ, ತಮ್ಮದೇ ಹೆಸರಿನಲ್ಲಿ ಕಥಾನಾಯಕನನ್ನಾಗಿ ಚಿತ್ರಿಸಿಕೊಂಡಿರುವದು **'ಕೊನೆ'** ಕಥೆಯಲ್ಲಿ. **'ರವಿ ಬೆಳಗೆರೆ'** ಪಾತ್ರವೇ ಈ ಕಥೆಯ ನಿರೂಪಕ. ಆಫೀಸ್‌ವೊಂದರಲ್ಲಿ ಕೆಲಸ ಮಾಡುವ ರವಿ ಬೆಳಗೆರೆ ಕನ್ನಡದ ಖ್ಯಾತ ಕಥೆಗಾರ. ಹುಬ್ಬಳ್ಳಿಯ 'ಸಫೀನಾ' ಅಪಾರ್ಟಮೆಂಟ್'ನಲ್ಲಿ ವಾಸಿಸುವ ರವಿ ಬೆಳಗೆರೆಯ ಕಣ್ಣಿಗೆ ಅದೇ ಅಪಾರ್ಟ್‌ಮೆಂಟ್‌ನಲ್ಲಿರುವ ಜೋಸೆಫೀನ್ ಎಂಬ ಕ್ರಿಶ್ಚಿಯನ್ ಸುಂದರಿ ಕಾಣುತ್ತಾಳೆ. ಅವಳ ಮೋಹಕ ಮೊಣಕಾಲುಗಳಿಗೆ ಮನಸೋಲುವ ನಿರೂಪಕ ಅವಳನ್ನು ಪ್ರೀತಿಸಲಾರಂಭಿಸುತ್ತಾನೆ. ಪ್ರತಿದಿನ ಬೆಳಗ್ಗೆ ಆರು ಗಂಟೆ ಹತ್ತು ನಿಮಿಷಕ್ಕೆ ಸರಿಯಾಗಿ ಹಾಲಿನ ಪ್ಯಾಕೇಟ್ ತೆಗೆದುಕೊಳ್ಳಲು ಐದನೇ ಮಹಡಿಯಿಂದ ಕೆಳಗಿಳಿದು ಬರುವ ಜೋಸೇಫಿನ್‌ಳನ್ನು ನೋಡಲು ಕಾತರಿಸುವ ನಿರೂಪಕನ ಜೀವನ ಶೈಲಿಯೇ ಬದಲಾಗಿ ಹೋಗುತ್ತದೆ. ನಿಧಾನವಾಗಿ ಪರಿಚಯವಾಗುವ ಜೋಸೆಫೀನ್‌ಗೆ ತನ್ನ ಪ್ರೀತಿಯನ್ನು ನಿವೇದಿಸಿಕೊಳ್ಳಲು ಪಾರ್ಟಿಯೊಂದನ್ನು ಮಾಡಿ ಅವಳನ್ನು ಆಹ್ವಾನಿಸುತ್ತಾನೆ. ಅದೇ ಸಮಯಕ್ಕೆ ಭೇಟಿಯಾಗುವ ನಿರೂಪಕನ ಬಳ್ಳಾರಿಯ ಹುಂಬ ಮಿತ್ರ ಅಜಯಕುಮಾರ ಪಾಟೀಲ ಪಾರ್ಟಿಗೆ ಜೊತೆಯಾಗುತ್ತಾನೆ. ಇನ್ನೊಬ್ಬ ಮಿತ್ರ ಅಶೋಕ ಶೆಟ್ಟರ ಜೊತೆಗೆ ಪಾರ್ಟಿ ಆರಂಭವಾಗುತ್ತದೆ. ಪಾರ್ಟಿಗೆ ಬರುವ ಜೋಸೆಫೀನ್‌ಳೊಂದಿಗೆ ಅಜಯಕುಮಾರ ಪಾಟೀಲ ಅನುಚಿತವಾಗಿ ವರ್ತಿಸುತ್ತಾನೆ. ಇದರಿಂದ

ಕೋಪಗೊಂಡ ಜೋಸೆಫೀನ್ ಪಾರ್ಟಿಯಿಂದ ಹೊರ ನಡೆಯುತ್ತಾಳೆ. ರವಿ ಬೆಳಗೆರೆಯ ಪ್ರೇಮ ನಿವೇದನೆ ಎದೆಯಲ್ಲೇ ಉಳಿಯುತ್ತದೆ. ತನ್ನೊಂದಿಗೆ ಸಂಪರ್ಕ ಕಡಿದುಕೊಳ್ಳುವ ಜೋಸೆಫೀನ್‌ನಿಂದ ನೋವು ಅನುಭವಿಸುವ ರವಿ ಬೆಳಗೆರೆ ಆ ಅಪಾರ್ಟ್‌ಮೆಂಟ್‌ನ್ನೇ ಬಿಟ್ಟು ಹೋಗುವ ನಿರ್ಧಾರ ತೆಗೆದುಕೊಳ್ಳುತ್ತಾನೆ. ಅಂತಿಮವಾಗಿ ಅವಳಿಗೆ ಹೇಳಿ ಹೋಗಲು ಕರೆಗಂಟೆ ಒತ್ತುತ್ತಾನೆ. ಬಾಗಿಲು ತೆರೆದಾಗ ಅಜಯಕುಮಾರ ಪಾಟೀಲನ ಬೆನ್ನಿಗಾನಿಕೊಂಡು ಜೋಸೆಫೀನ್ ನಿಂತಿರುತ್ತಾಳೆ! ಅದನ್ನೇ ಒಂದು ಕಥೆಯನ್ನಾಗಿ ಕಥೆಗಾರ ರವಿಬೆಳಗೆರೆ ಬರೆಯತೊಡಗುತ್ತಾನೆ.

'ಕೊನೆ' ಕಥೆಯ ಇನ್ನೊಂದು ಮುಖ್ಯ ಪಾತ್ರ **'ಅಜಯ್ ಕುಮಾರ್ ಪಾಟೀಲ'**ನದು. ಕಥಾನಾಯಕನ ಬಾಲ್ಯದ ಮಿತ್ರ, ಖಾಸಾ ದೋಸ್ತ. ಬಳ್ಳಾರಿಯವನು. ಭಾರಿ ಶ್ರೀಮಂತ ಮನೆತನದ ಅಜಯ್ ಕಾಲೇಜು ದಿನಗಳಲ್ಲಿ ರವಿ ಬೆಳಗೆರೆಯ ಖರ್ಚಿಗೆ, ಕಾಲೇಜು ಫೀಸ್‌ಗೆ ಹಣ ಕೊಡುತ್ತಿದ್ದವನು. ತನ್ನ ಸ್ನೇಹಿತ ರವಿಯ ಮೇಲೆ ಅದಮ್ಯವಾದ ಹುಂಬ ಪ್ರೀತಿ ಹೊಂದಿದವನು. ಧರಿಸಿರುವ ಬಟ್ಟೆ ಮತ್ತು ಬೂಟುಗಳ ಹೊರತಾಗಿ ಮೈಮೇಲೆಲ್ಲಾ ಬಂಗಾರವನ್ನೇ ಹಾಕಿಕೊಂಡಿರುತ್ತಾನೆ. ಚೈನು, ಉಂಗುರಗಳು, ವಾಚಿನ ಪಟ್ಟಿ, ಲಾಕೆಟ್ಟು, ಮುಂಗೈಗೊಂದು ಚೈನು, ಕೊನೆಗೆ ಅಂಗಿಯ ಗುಂಡಿಗಳಿಗೂ ಬಂಗಾರವೇ ಹೊದ್ದುಕೊಂಡಿರುತ್ತಾನೆ. ಲೀಟರುಗಟ್ಟಲೇ ಕುಡಿಯುವ ಅಜಯ್, ಬಾಯಿ ಬಿಟ್ಟರೆ ಬಳ್ಳಾರಿಯ ಸ್ಲಮ್ ಮಾತಾಗಿ ಹರಿಯುತ್ತದೆ. ರವಿ ಬೆಳಗೆರೆಯ ಪಾರ್ಟಿಗೆ ಬರುವ ಅಜಯ್ ಬಾರದ ಇಂಗ್ಲೀಷು, ಒರಟು ಕನ್ನಡ ಎರಡೂ ಸೇರಿ ಜೋಸೆಫೀನ್‌ಳೊಂದಿಗೆ ಹರಟುತ್ತಾನೆ. ಕುಡಿದ ನಿಶೆಯಲ್ಲಿ ಅವಳ ಅಮೃತ ಶಿಲೆಯಂತಹ ನುಣುಪು ಮೊಣಕಾಲುಗಳನ್ನು ಅದುಮಿ 'ಯೂ ಆರ್ ಬ್ಯೂಟಿಫುಲ್' ಎಂದು ಬಿಡುತ್ತಾನೆ. ಇದರಿಂದ ಸಿಟ್ಟಾಗುವ ಜೋಸೆಫೀನ್ ನಂತರ ಅವನ ಶ್ರೀಮಂತಿಕೆಗೆ ಸೋತು ಅವನೊಂದಿಗೆ ಇರುತ್ತಾಳೆ. ಬಳ್ಳಾರಿ ಜನರ ಭಾಷೆ ಅಜಯ್ ಕುಮಾರ್ ಪಾಟೀಲನ ಪಾತ್ರದ ಸಂಭಾಷಣೆಯ ಮೂಲಕ ಈ ಕಥೆಯಲ್ಲಿ ವ್ಯಕ್ತವಾಗಿದೆ.

ಬಳ್ಳಾರಿಯ ಗೌಳೇರಹಟ್ಟಿಯ ಗಿಡ್ಡಾಂಜನೇಯ ಸ್ವಾಮಿ ಗುಡಿಯ ಪೂಜಾರಿ **'ಬಾಲಾಂಜಿ'**, 'ಗಿಡ್ಡಾಂಜನೇಯ ಸ್ವಾಮಿ' ಕಥೆಯ ಕಥಾನಾಯಕ. ಸದಾ ಶ್ರೀರಾಮ್ ಜೈರಾಮ್ ಎಂದು ಜಪಿಸುವ ಬಾಲಾಂಜಿ ಬ್ರಹ್ಮಚಾರಿ. ತಂದೆ ತಾಯಿ ಯಾರೆಂಬುದು ಗೊತ್ತಿಲ್ಲದ ಬಾಲಾಂಜಿಗೆ ಗುಡಿಯ ಹಿಂದೆ ಇರುವ ಬಾಗಿಲಿಲ್ಲದ ಚಿಕ್ಕ ಕೋಣೆಯೇ ಅವನ ಮನೆ. ಹಣೆಗೆ ದಟ್ಟ ಗುಲಾಬಿಯದೊಂದು ಉದ್ದನಾಮ ಇಟ್ಟುಕೊಂಡು, ಅದರ ಪಕ್ಕದಲ್ಲಿ ಗೋಪಿ ಚಂದನದ ಎರಡು ಬಿಳಿ ನಾಮಗಳನ್ನಿಟ್ಟುಕೊಳ್ಳುತ್ತಾನೆ. ಭರ್ತಿ ಎರಡು ತಾಸು ಸಾಮು ಮಾಡುವ ಬಾಲಾಂಜಿ ಮೈಯನ್ನು ಹುರಿಗೊಳಿಸಿಕೊಂಡಿರುತ್ತಾನೆ. ಪೂಜೆ ಮಾಡಿದ ಮೇಲೆ ಎಂಥ ಅಪರೂಪದ, ಸ್ಫುರದ್ರೂಪಿ ಹೆಂಗಸೇ ಬಂದು ಎದುರಿಗೆ ನಿಂತರೂ ಅವರ ಕೈಗೆ ಪ್ರಸಾದ,

ಅಕ್ಷತೆ, ಕಣಗಲೆ ಹೂವು ಕೊಟ್ಟವನು ಅಂಗೈ ರೇಖೆ ನೋಡಿರಬಹುದೇ ಹೊರತು ತಲೆ ಎತ್ತಿ ನೋಡಿದವನಲ್ಲ ಎಂಬುದು ಇಡೀ ಬಳ್ಳಾರಿಗರಿಗೆ ಗೊತ್ತು. ತನ್ನ ಜನ್ಮದಲ್ಲೆಂದೂ ನೋಡದ ಹೆಂಗಸರ ಸ್ತನಗಳ ಬಗ್ಗೆ ವಿಕಾರವಾದ ಆಲೋಚನೆಗಳು ಬಂದಾಗ ಅವುಗಳನ್ನು ಮರೆಯಲು ತನ್ನ ಎಮ್ಮೆಗಳಿಗೆ ಮೇವು ಕತ್ತರಿಸಿ, ಸಾಮು ಮಾಡಿ, ಅಲ್ಲೇ ಇದ್ದ ಬಾವಿಯಿಂದ ನೀರು ಸೇದಿಕೊಂಡು ಸ್ನಾನ ಮಾಡಿ ಬಿಡುತ್ತಾನೆ. ಪ್ರತಿದಿನ ಪುಟ್ಟ ಆಂಜನೇಯ ಸ್ವಾಮಿಗೆ ಒಗೆದ ಉತ್ತರೀಯ, ಜನಿವಾರ ತೊಡಸಿ, ಹೂಗಳಿಂದ ಅಲಂಕಾರ ಮಾಡುತ್ತಾನೆ. ತನ್ನ ಗುಡಿಗೆ ಇನ್ನು ಹೆಚ್ಚಿನ ಭಕ್ತರನ್ನು ಆಕರ್ಷಿಸಲು ಬ್ರಾಹ್ಮಣರ ನಗರೇಶ್ವರ ದೇವಸ್ಥಾನವನ್ನು ಒಮ್ಮೆ ನೋಡಿಕೊಂಡು ಬಂದು ಅದರಲ್ಲಿದ್ದಂತೆ ತನ್ನ ಗುಡಿಗೂ ಲೌಡ್‌ಸ್ಪೀಕರ್, ವಿದ್ಯುತ್‌ನಿಂದ ಹೊಡೆಯುವ ನಗಾರಿ, ಗಂಟೆ, ವಿದ್ಯುತ್ ಬಲ್ಬ್‌ಗಳನ್ನು ಅಳವಡಿಸುತ್ತಾನೆ. ಅದುವರೆಗೂ ಕಾಪಾಡಿಕೊಂಡ ಬಾಲಾಂಜಿಯ ಬ್ರಹ್ಮಚರ್ಯವನ್ನು ದೋಚುವ 'ಸಿರಿಜಾತ' ಈ ಕಥೆಯ ಇನ್ನೊಂದು ಬಹುಮುಖ್ಯ ಪಾತ್ರ.

ಬಳ್ಳಾರಿಯ ಸೋಡ ಸಂಜೀವಣ್ಣನ ಮಗ ಮಲ್ಲೇಶಿಯ ಹೆಂಡತಿ **'ಸಿರಿಜಾತ',** ಮೂವತ್ತೆರಡು ವರ್ಷ ವಯಸ್ಸಿನವಳು. ಮದುವೆಯಾಗಿ ಎಂಟು ವರ್ಷಗಳಾದರೂ ಈಕೆಗೆ ಮಕ್ಕಳಾಗಿಲ್ಲ. ಹೆಂಡತಿಯ ದೈಹಿಕ ಅಗತ್ಯತೆಗಳ ಬಗ್ಗೆ ಸದಾ ನಿರ್ಲಕ್ಷ್ಯ ವಹಿಸುವ ತನ್ನ ಗಂಡನಿಂದ ಬೇಸತ್ತ ಸಿರಿಜಾತ ಗಿಡ್ಡಾಂಜನೇಯ ಸ್ವಾಮಿ ಗುಡಿಯ ಪೂಜಾರಿ ಬಾಲಾಂಜಿನಿಯ ಕಡೆಗೆ ಆಕರ್ಷಿತಳಾಗುತ್ತಾಳೆ. ಒಂದು ರಾತ್ರಿ ಗುಡಿಯ ಹಿಂದಿನ ಬಾಲಾಂಜಿ ಮನೆಹೊಕ್ಕು ಬಾಲಾಂಜಿಯೊಂದಿಗೆ ಕೂಡುತ್ತಾಳೆ. ಹೆಣ್ಣಿನ ಸಂಗಸುಖವನ್ನೇ ಕಾಣದ ಬಾಲಾಂಜಿ ವಿಂಭ್ರಾಂತನಾಗುತ್ತಾನೆ. ನಂತರ ಸಿರಿಜಾತಳ ಗರ್ಭ ಫಲಿಸಿ ಗಂಡು ಮಗುವಿನ ತಾಯಿಯಾಗುತ್ತಾಳೆ. ಸಿರಿಜಾತ ಏಳು ತಿಂಗಳ ಗರ್ಭಿಣಿಯಾಗಿದ್ದಾಗ ಊರಿಂದ ಬಳ್ಳಾರಿಗೆ ಬರುವ ಅವಳ ತಂಗಿ 'ಪಾರಿಜಾತ' ಅಕ್ಕನ ಮನೆಯಲ್ಲೇ ನೆಲೆಗೊಳ್ಳುತ್ತಾಳೆ. ಅವಳದು ಈ ಕಥೆಯ ಇನ್ನೊಂದು ಮುಖ್ಯ ಪಾತ್ರ.

ಅಕ್ಕನ ಮನೆಗೆ ಬರುವ **'ಪಾರಿಜಾತ'**ಳೊಂದಿಗೆ ಸಿರಿಜಾತಳ ಗಂಡ ಮಲ್ಲೇಶಿ ವಿಪರೀತ ಸಲುಗೆಯಿಂದ ವರ್ತಿಸತೊಡಗುತ್ತಾನೆ. ಸಿರಿಜಾತಳೂ ಕೂಡಾ ತನ್ನ ಭಾವನೊಂದಿಗೆ ಸರಸ ಸಲ್ಲಾಪದಲ್ಲಿ ತೊಡಗುತ್ತಾಳೆ. ಇದನ್ನು ಕಂಡು ಸಿರಿಜಾತ ಬಾಲಾಂಜಿನಿಯ ಹತ್ತಿರ ಹೇಳಿಕೊಂಡು ಕಣ್ಣೀರಾಗುತ್ತಾಳೆ. ಅವಳನ್ನು ಸಮಾಧಾನ ಪಡಿಸುವ ಬಾಲಾಂಜಿ ಪಾರಿಜಾತಳ ಮೇಲೆ ಮೋಹಗೊಳ್ಳುತ್ತಾನೆ. ಸಿರಿಜಾತಳ ಹೆರಿಗೆಯಾದ ದಿನದಂದು ಬಾಲಾಂಜಿಯ ಮನೆಗೆ ಬರುವ ಪಾರಿಜಾತ ಬಾಲಾಂಜಿಯೊಂದಿಗೆ ದೈಹಿಕ ಮಿಲನ ಹೊಂದುತ್ತಾಳೆ. ಆ ನಂತರ ಅವರಿಬ್ಬರಲ್ಲಿ ಅನೈತಿಕ ಸಂಬಂಧ ಮುಂದುವರಿಯುತ್ತದೆ. ಈ ನಡುವೆ ಸಿರಿಜಾತ ಮತಿಭ್ರಾಂತಳಾಗುತ್ತಾಳೆ. ಸೋಡ ಮಲ್ಲೇಶಿ ಪಾರಿಜಾತಳನ್ನು ಮದುವೆಯಾಗುತ್ತಾನೆ. ಬಾಲಾಂಜಿಯ ಜೀವ ಸೃಷ್ಟಿ ಪಾರಿಜಾತಳ ಗರ್ಭದಲ್ಲಿ ಬೆಳೆಯುತ್ತಿರುತ್ತದೆ. ಇದರ ಅರಿವಿಲ್ಲದ ಮಲ್ಲೇಶಿ ಹೊಟ್ಟೆಯೊಳಗಿನ

ಕೂಸು ತನ್ನದೇ ಎಂಬ ಭ್ರಮೆಯಲ್ಲಿರುತ್ತಾನೆ. ಸಿರಿಜಾತ ಮತ್ತು ಪಾರಿಜಾತರ ನಡುವೆ ಸಿಲುಕಿ ಬ್ರಹ್ಮಚರ್ಯವನ್ನು ಕಳೆದುಕೊಂಡ ಬಾಲಾಂಜಿ ನಂತರ ತನ್ನ ಮಾನಸಿಕ ನೆಮ್ಮದಿಯನ್ನು ಕಳೆದುಕೊಳ್ಳುತ್ತಾನೆ. ದೇವರನ್ನು ಮುಟ್ಟಿ ಪೂಜೆಮಾಡುವ ಮೊದಲಿನ ನಿಷ್ಠೆ, ದೃಢತೆಗಳು ಉಳಿಯುವುದಿಲ್ಲ. ಪದೇ ಪದೇ ಮನಸ್ಸಿನಲ್ಲಿ ಬಂದು ಕಾಡುವ ಪಾರಿಜಾತಳ ಚಿತ್ರದಿಂದ ತಪ್ಪಿಸಿಕೊಳ್ಳುವ ಪ್ರಯತ್ನದಲ್ಲೇ ಬಾಲಾಂಜಿ ಕೊನೆಯುಸಿರೆಳೆಯುತ್ತಾನೆ. ನಂತರ ಪಾರಿಜಾತ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಮಗು ಬೆಳೆದು ದೊಡ್ಡದಾದಂತೆಲ್ಲಾ ಬಾಲಾಂಜಿಯಂತೆ ವರ್ತಿಸತೊಡಗುತ್ತದೆ.

'ಮಿನಾರುಗಳ ಊರಿನಲ್ಲಿ ಅವರು' ಕಥೆಯಲ್ಲಿ ಇಬ್ಬರು **ವಿವಾಹಿತ ಪ್ರೇಮಿಗಳೇ** ಕಥೆಯ ಮುಖ್ಯ ಪಾತ್ರಗಳು. ಈ ಪಾತ್ರಗಳಿಗೆ ಈ ಕಥೆಯಲ್ಲಿ ಹೆಸರೇ ಇಲ್ಲ. ಮೂವತ್ತೈದು ವಯಸ್ಸಿನ ಈ ಪ್ರೇಮಿಗಳು ಪರಸ್ಪರ ಭೇಟಿಯಾಗಲು ತಮ್ಮ ತಮ್ಮ ಸಂಸಾರಗಳನ್ನೇ ತೊರೆದು ಬರುತ್ತಾರೆ. ಈ ಕಥೆಯ ಕಥಾನಾಯಕ ಹಾಗೂ ಕಥಾನಾಯಕಿಯರ ಪಾತ್ರ ಚಿತ್ರಣವನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದು.

ಈ ಕಥೆಯ 'ಕಥಾನಾಯಕ' ಮಾಂಸದಂಗಡಿಯವನು. ಕಥಾನಾಯಕಿಯ ಮನೆಯ ಎದುರು ಬೀದಿಯಲ್ಲಿ ಮಾಂಸದಂಗಡಿ ತೆರೆಯುತ್ತಾನೆ. ಬೇರೊಬ್ಬಳನ್ನು ಮದುವೆಯಾಗುವ ಕಥಾನಾಯಕನಿಗೆ ಮಕ್ಕಳೂ ಆಗುತ್ತವೆ. ಆದರೆ ತನ್ನ ಪ್ರೇಯಸಿಯ ನೆನಪು ಮರೆಯಾಗುವುದಿಲ್ಲ. ಮಿನಾರುಗಳ ಊರಿನಲ್ಲಿ ಭೇಟಿಯಾಗುವ ಅವಳಿಗೆ ಪ್ರೀತಿಯಿಂದ 'ವೆನ್ನೆಲ್ಲಾ' ಎಂಬ ಹೆಸರಿನಿಂದ ಕರೆಯುತ್ತಾನೆ. ('ವೆನ್ನೆಲ್ಲಾ' ಎಂದರೆ ಬೆಳದಿಂಗಳು ಎಂದರ್ಥ). ಮರುದಿನ ತನ್ನ ಗಂಡನ ಮನೆಗೆ ಹೋಗಲೇಬೇಕು ಎನ್ನುವ ಅವಳು ಅವನಿಗೆ ಏನಾದರೂ ಕೊಡಬೇಕೆಂದುಕೊಂಡು ತನ್ನ ದೇಹವನ್ನೇ ಧಾರೆಯೆರೆಯಲು ಸಿದ್ಧಳಾಗುತ್ತಾಳೆ. ಅದಕ್ಕೆ ಕಥಾನಾಯಕ 'ನಿನ್ನಲ್ಲಿರುವುದು ಇದೊಂದೇ ಆದರೆ ಅದನ್ನು ದೋಚಿ ಏನಾಗಬೇಕು? ನೆಮ್ಮದಿಯಿಂದ ಮಲಗಿ ನಿದ್ದೆಮಾಡು' ಎನ್ನುತ್ತಾನೆ.

ಈ ಕಥೆಯ 'ಕಥಾನಾಯಕಿ' ತನ್ನ ಮನೆಯ ಕಿಟಕಿಯಿಂದ ಎದುರುಗಡೆಯ ಬೀದಿಯಲ್ಲಿ ಮಾಂಸದಂಗಡಿಯ ಕಥಾನಾಯಕನನ್ನು ನೋಡುತ್ತಾ ಪ್ರೀತಿಸತೊಡಗುತ್ತಾಳೆ. ಅವನು ಅಂಗಡಿ ಮುಚ್ಚಿದ ದಿನದಿಂದಲೇ ಮಾಂಸ ತಿನ್ನುವುದನ್ನು ಬಿಟ್ಟುಬಿಡುತ್ತಾಳೆ. ಬೇರೊಬ್ಬನನ್ನು ಮದುವೆಯಾಗುವ ಅವಳು ತನ್ನ ಪ್ರಿಯಕರನನ್ನು ಮರೆಯುವುದಿಲ್ಲ. ಅವಳ ಗಂಡ ಆಗರ್ಭ ಶ್ರೀಮಂತ. ಒಳ್ಳೆಯವನೇ ಆದರೂ ವಿಚಿತ್ರ ಸ್ವಭಾವದವನು ಹಾಗೂ ಭಯವಾಗುವಷ್ಟು ಮೌನವಾಗಿರುವವನು. ಅವಳನ್ನು ಪ್ರತಿಕ್ಷಣ ಕ್ಷಣವೂ ಕಾಯುತ್ತಾನೆ. ನಿದ್ದೆಮಾಡುವ ಅವಳನ್ನೇ ನೋಡುತ್ತಾ ಕೂರುತ್ತಾನೆ. ಅವಳು ಸ್ನಾನಕ್ಕೆ ಹೋದಾಗ ಹಿತ್ತಲಲ್ಲಿ ನಿಂತು ಕಾಯುತ್ತಾನೆ. ಇಂಥವನ ಹೆಂಡತಿಯಾದ ಕಥಾನಾಯಕಿ ತನಗೆ ಹೊಟ್ಟೆ ನೋವೆಂದೂ, ತವರಿಗೆ ಹೋಗಿ ತಾಯಿಯನ್ನು ನೋಡಿಕೊಂಡು ಬರುತ್ತೇನೆಂದು ಅವನಲ್ಲಿ ಬೇಡಿಕೊಳ್ಳುತ್ತಾಳೆ.

ಅದಕ್ಕೇನೂ ಪ್ರತಿಕ್ರಿಯಿಸದ ಅವನು ನಿದ್ದೆಗೆ ಜಾರಿದಾಗ ಮನೆಯ ಗೋಡೆಯನ್ನು ಧುಮುಕಿ ತನ್ನ ಪ್ರಿಯಕರನೊಂದಿಗೆ ಓಡಿ ಬರುತ್ತಾಳೆ ಮಿನಾರುಗಳ ಊರಿಗೆ.

ತನ್ನ ಪ್ರಿಯಕರನನ್ನು ಅವಳು ಎಷ್ಟು ತೀವ್ರತೆಯಿಂದ ಪ್ರೀತಿಸುತ್ತಾಳೆ ಎಂಬುವುದಕ್ಕೆ ಅವನಿಗೆ ಹೇಳುವ ಅವಳ ಮಾತುಗಳೇ ಸಾಕು. 'ನನಗೆ ಬೇಕಾದ್ದು ನೀನು. ನಿನ್ನ ಮಡಿಲು. ನಿನ್ನೆದುರು ನಾನು ಮೈ ತುಂಬಾ ಹೊದ್ದರೂ ಬೆತ್ತಲೆಯೇ. ನೋಡು, ಈ ಶಿಥಿಲಗಳ ಮೇಲಾಣೆ... ನಿನ್ನ ಕೈಗೆ ಸಿಕ್ಕಿದ್ದೇನೆ. ಬೇಕಾದ್ದು ಮಾಡು. ಪ್ರೀತಿಸು, ಹಾಡು, ನನ್ನ ಮೈತುಂಬಾ ಕವಿತೆ ಬರಿ, ಗೋಡೆಗೆ ಮೆತ್ತಿ ಚಿತ್ರವಾಗಿಸು, ಉಗುರಲ್ಲಿ ಬಗೆದು ನನ್ನಲ್ಲೊಂದು ದೊಗರು ಮಾಡು, ಬಡಿ, ಕೊಲ್ಲು... ಆದರೆ ಮಿತ್ರಾ, ಮನೆಗೆ ಕಳಿಸುವ ಮುನ್ನ ನನ್ನೆದೆಯಲ್ಲೊಂದು ಕನಸು ಹುಟ್ಟಿಸು. ಒಂದು ಹಾಡು ಚಿಗುರಿಸು. ನನ್ನೆಲ್ಲ ದುರಂತಮಯ ರಾತ್ರಿಗಳನ್ನು ನಿನ್ನ ನೆನಪಿನಾಸರೆಯಿಂದ ನಿರಾತಂಕವಾಗಿ ಕಳೆದು ಬಿಡುವಷ್ಟು ಮಾತ್ರದ ಧೈರ್ಯವನ್ನು ಬಟ್ಟಲೊಂದರಲ್ಲಿ ಎತ್ತಿಕೊಡು ಅಷ್ಟು ಸಾಕು'' ಈ ಮಾತುಗಳು ತನ್ನ ಪ್ರಿಯಕರನ ಮೇಲಿರುವ ಅದಮ್ಯ ಪ್ರೀತಿಯನ್ನು ವ್ಯಕ್ತಪಡಿಸುತ್ತವೆ. ಈ ಕಥೆಯಲ್ಲಿ ಈ ಇಬ್ಬರೂ ಪ್ರೇಮಿಗಳ ಮೂಲಕ ಪ್ರೇಮಕ್ಕೆ ಹೊಸ ಭಾಷ್ಯ ಬರೆದಿದ್ದಾರೆ ರವಿ ಬೆಳಗೆರೆ.

ಹೆಂಡತಿಯನ್ನು ಬಿಟ್ಟು ಪ್ರೇಯಸಿಯೆಡೆಗೆ ಬರುವ ಕಥಾನಾಯಕನನ್ನು ಕುರಿತ ಕಥೆ **'ಸತ್ಯಭಾಮೆಯ ತೆಕ್ಕೆಯಿಂದ'** ಈ ಕಥೆಯ ಕಥಾನಾಯಕನಿಗಾಗಲೀ, ಕಥಾನಾಯಕನ ಹೆಂಡತಿ, ಪ್ರೇಯಸಿಯರಿಗಾಗಲೀ ಹೆಸರಿಲ್ಲ. ತುಂಬಾ ಸೊಗಸಾಗಿ ಕೊಳಲು ನುಡಿಸುವ ಕಥಾನಾಯಕನನ್ನು ಕೃಷ್ಣನೆಂದೂ, ಅವನ ಹೆಂಡತಿ ರಾಧೆಯೆಂದೂ, ಪ್ರೇಯಸಿಯನ್ನು ಸತ್ಯಭಾಮೆಯೆಂದು ಸಾಂಕೇತಿಕವಾಗಿ ಕಥೆಗಾರರು ಇಲ್ಲಿ ಚಿತ್ರಿಸಿದ್ದಾರೆ. ಕಥಾನಾಯಕ ತನ್ನ ಹೆಂಡತಿಯೊಂದಿಗಿನ ಹದಿನಾಲ್ಕು ವರ್ಷದ ಸಂಸಾರದ ಬಂಧನವನ್ನು ಕಳಚಿಕೊಂಡು, ಹೆಂಡತಿಗೊಂದು ಚಿಕ್ಕದೊಂದು ವಿದಾಯವೂ ಹೇಳದೇ ಮಧ್ಯರಾತ್ರಿ ಮನೆಯಿಂದ ಹೊರಬೀಳುತ್ತಾನೆ. ತನ್ನ ಕೊಳಲಿನೊಂದಿಗೆ ಬೆಂಗಳೂರಿಗೆ ಬರುವ ಕಥಾನಾಯಕನ ಕೊಳಲಿನ ದನಿಗೆ ಅವನ ಪ್ರೇಯಸಿ ಮನ ಸೋಲುತ್ತಾಳೆ. ಆದರೆ ಕಥಾನಾಯಕನ ವ್ಯಕ್ತಿತ್ವ, ಜೀವನ ಶೈಲಿಯನ್ನು ಬದಲಾಯಿಸ ತೊಡಗುತ್ತಾಳೆ. ನೀನು ಹೀಗಲ್ಲ, ಹೇಗೊ ಇರಬೇಕು ಎಂದು ಬೋಧನೆಗೆ ತೊಡಗುತ್ತಾಳೆ. ಫೋನ್‌ಗೆ ಸಿಕ್ಕಿದಿದ್ದಾಗ ನೂರೆಂಟು ಪ್ರಶ್ನೆಗಳನ್ನು ಕೇಳುತ್ತಾಳೆ. ಯಾಕೆ ಸಿಗಲಿಲ್ಲ? ಎಲ್ಲಿಗೆ ಹೋಗಿದ್ದೆ? ಫೋನೇಕೆ ಎಂಗೇಜಾಗಿತ್ತು? ಕಣ್ಣೇಕೆ ಕೆಂಪಗಿವೆ? ರಾತ್ರಿ ಎಲ್ಲಿದ್ದೆ? ಹೀಗೆ ಪ್ರಶ್ನೆಗಳ ಸುರಿಮಳೆ ಹರಿಸುತ್ತಾಳೆ. ಕಥಾನಾಯಕನಿಗೆ ಅವಳ ಅತಿಯಾದ ಪ್ರೀತಿ ಉಸಿರು ಕಟ್ಟಿಸತೊಡಗುತ್ತದೆ. ತನ್ನ ಹೆಂಡತಿಯ ಸ್ವಭಾವವನ್ನು ನೆನಪಿಸಿಕೊಳ್ಳುತ್ತಾನೆ. ತಾನು ಹೆಂಡತಿಯನ್ನು ತೊರೆದು ಬಂದಿರುವುದು ತಪ್ಪು ಎನಿಸಿ ಪ್ರೇಯಸಿಯನ್ನು ಬಿಟ್ಟು ಮತ್ತೆ ತನ್ನ ಹೆಂಡತಿಯೊಂದಿಗೆ ಇರಲು ಊರಿಗೆ ಹೊರಡುತ್ತಾನೆ. ಆದರೆ ಹೆಂಡತಿ ತನ್ನ ಮಕ್ಕಳೊಂದಿಗೆ ಯಾರೊಂದಿಗೊ ಬೆಂಗಳೂರಿಗೆ ಹೋಗಿ ನೆಲೆಸಿರುತ್ತಾಳೆ. ಕಥಾನಾಯಕ ಸುಮ್ಮನಾಗುತ್ತಾನೆ.

ತಂದೆ-ಮಗಳ ನಡುವಿನ ಪ್ರೀತಿ ಹಾಗೂ ಪ್ರೇಮಿಗಳ ನಡುವಿನ ಪ್ರೀತಿ ಈ ಎರಡೂ ಬಗೆಯ ಪ್ರೀತಿಯ ಸ್ವರೂಪವನ್ನು **'ಬರುವನೇನೇ ಸಖೀ ಚೆಲುವ...'** ಕಥೆಯ ಪಾತ್ರಗಳ ಮೂಲಕ ನೋಡಬಹುದು. ಈ ಕಥೆಯಲ್ಲಿ ಕಥಾನಾಯಕಿ ಹಾಗೂ ಆಕೆಯ ಅಪ್ಪ ಇವೆರಡೂ ಪಾತ್ರಗಳಿಗೆ ಹೆಸರಿಲ್ಲ. ಕಥಾನಾಯಕಿಯ ಪ್ರಿಯತಮನ ಹೆಸರು ಮುಕುಂದ. ಈ ಮೂರು ಪಾತ್ರಗಳೇ ಈ ಕಥೆಯ ಜೀವಾಳ. ಈ ಪಾತ್ರಗಳನ್ನು ಈ ಕೆಳಗಿನಂತೆ ಚಿತ್ರಿಸಿಬಹುದು.

ಯೂನಿವರ್ಸಿಟಿಯೊಂದರಲ್ಲಿ ಓದುವ 'ಕಥಾನಾಯಕಿ' ಹಾಸ್ಟೆಲ್‌ನಲ್ಲಿ ವಾಸಿಸುತ್ತಾಳೆ. ಬಾಲ್ಯದಿಂದಲೂ ತಾಯಿಗಿಂತ ಹೆಚ್ಚಾಗಿ ತನ್ನ ತಂದೆಯ ಹತ್ತಿರವೇ ಪ್ರೀತಿ ಒಡನಾಟ ಹೊಂದಿರುವವಳು. ತಂದೆಯೇ ವಿದ್ಯೆ ಕಲಿಸಿದ ಮೊದಲ ಗುರು. ಅವಳಿಗೆ ನಾಲ್ಕನೇ ಕ್ಲಾಸ್‌ನವರೆಗೆ ಮನೆಯಲ್ಲೇ ಪಾಠ ಹೇಳಿಕೊಡುತ್ತಾನೆ. ಪ್ರತಿ ಪಾಠಕ್ಕೂ ಹಾಡು, ನೃತ್ಯ. ಐದನೇ ಕ್ಲಾಸ್‌ಗೆ ಸೇರುವ ಕಥಾನಾಯಕಿಯ ಬುದ್ಧಿವಂತಿಕೆಗೆ ಮಾಸ್ತರು ಅಚ್ಚರಿ ಪಡುತ್ತಾರೆ. ಯೂನಿವರ್ಸಿಟಿಯಲ್ಲಿ ಮುಕುಂದನೊಂದಿಗೆ ಬೆಳೆಯುವ ಪ್ರೀತಿಯ ಮೊದಲ ಎಳೆಯನ್ನು ತಂದೆಗೆ ಪತ್ರ ಬರೆದು ತಿಳಿಸುತ್ತಾಳೆ. ತನ್ನ ಪರೀಕ್ಷೆಯ ಹೊತ್ತಿಗೆ ಹಾಸ್ಟೆಲ್ ರೂಂ ಖಾಲಿ ಮಾಡಿ ಮುಕುಂದನೊಂದಿಗಿರಲು ಪ್ರಾರಂಭಿಸುತ್ತಾಳೆ. ಅವನನ್ನು ಗೇಲಿ ಮಾಡುವುದು, ಪುಸ್ತಕ ಕಿತ್ತುಕೊಳ್ಳುವುದು, ತಲೆ ಕೆದರುವುದನ್ನು ಮಾಡಿ ಗೋಳು ಹೊಯ್ದುಕೊಳ್ಳುತ್ತಾಳೆ. ಸ್ನಾನ ಮಾಡುತ್ತಿರುವ ಅವನ ಬೆನ್ನುಜ್ಜಲು ಹಟಹಿಡಿವ ಕಥಾನಾಯಕಿ ಅಲ್ಲಿ ಮುಕುಂದನೊಂದಿಗೆ ದೈಹಿಕ ಮಿಲನ ಹೊಂದುತ್ತಾಳೆ. ಕೊಳಲನ್ನು ಕಲಿಯಲು ಇನ್ನೊಬ್ಬ ಗುರುವನ್ನು ಹುಡುಕಿಕೊಂಡು ಹೊರಡುವ ಮುಕುಂದ್ ಒಂದು ವರ್ಷದ ಮಟ್ಟಿಗೆ ಅವಳನ್ನು ಅನಿವಾರ್ಯವಾಗಿ ಅಗಲಿರಬೇಕಾದ ಸಂದರ್ಭ ಒದಗುತ್ತದೆ. ಅವನು ಹೊರಟು ಹೋದ ನಂತರ ಕಥಾನಾಯಕಿಗೆ ತಾನು ಗರ್ಭಿಣಿಯಾಗಿರುವುದು ಗೊತ್ತಾಗುತ್ತದೆ. ಅದನ್ನು ತನ್ನ ತಂದೆಗೆ ತಿಳಿಸುತ್ತಾಳೆ. ಅಂಥ ಸ್ಥಿತಿಯನ್ನು ತಂದುಕೊಂಡ ಮಗಳೊಂದಿಗೆ ಒಬ್ಬ ಜವಬ್ದಾರಿಯುತ ತಂದೆಯಂತೆ ವರ್ತಿಸುವ ಅವಳ ತಂದೆ ಈ ಕಥೆಯ ಇನ್ನೊಂದು ಮುಖ್ಯ ಪಾತ್ರ.

ಕಥಾನಾಯಕಿಯ ತಂದೆ ಬಾಲ್ಯದಲ್ಲೇ ಮಗಳಿಗೆ ವಿದ್ಯೆಯೊಂದಿಗೆ ಹೊಳೆಯಲ್ಲಿ ಈಸುವುದನ್ನು ಕಲಿಸುತ್ತಾನೆ. ಮಗಳನ್ನು ತುಂಬಾ ಪ್ರೀತಿಯಿಂದ ಸಲಹುವ ಅವನು ಮಗಳ ಮನಸ್ಸಿನಲ್ಲಿ ಹುಟ್ಟಿರುವ ಪ್ರೇಮದ ಮೊದಲ ಚಿಗುರನ್ನು ಗುರುತಿಸುತ್ತಾನೆ. 'ಪ್ರೀತಿ ಅನ್ನೋದು ಉನ್ಮಾದವನ್ನು ಮೀರಿದ ಸ್ಥಿತಿ ಮಗಳೇ. ಉನ್ಮಾದಕ್ಕೆ ಹದಿನಾರು ಕೈಯಿ, ಹದಿನೆಂಟು ಕಾಲು, ಕಂಡದ್ದೆಲ್ಲ ಬೇಕೆನ್ನುತ್ತದೆ: ಆಗಲೇ. ಹೆಚ್ಚಿನವರು ಸತ್ತು ಹೋಗುವತನಕ ಉನ್ಮಾದಿಗಳಾಗೇ ಇರುತ್ತಾರೆ. ಅದನ್ನೇ ಪ್ರೀತಿಯೆಂದುಕೊಂಡಿರುತ್ತಾರೆ. ಹೆಚ್ಚು ಹೆಚ್ಚು ಉನ್ಮಾದ ಹುಟ್ಟಿದ ಹಾಗೆಲ್ಲ ಹೆಚ್ಚು ಹೆಚ್ಚು ಪ್ರೀತಿ ಹುಟ್ಟುತಿದೆ ಅಂದುಕೋತಾರೆ. ಪ್ರೀತಿ ಅದಲ್ಲ. ಅದಕ್ಕೆ ಹದಿನಾರಿಲ್ಲ. ಹದಿನೆಂಟಿಲ್ಲ. ಇರುವುದು ಒಂದೇ ಆತ್ಮ. ಮರೇಹಳ್ಳಿ ನರಸಿಂಹಸ್ವಾಮಿ

ಸನ್ನಿಧಿಯಲ್ಲಿ ಸುಮ್ಮನೇ ಒಂದು ನೀಲಾಂಜನ ಉರಿದ ಹಾಗೆ ಅದಕ್ಕೆ ನಿರೀಕ್ಷೆಗಳಿರುವುದಿಲ್ಲ. ಹಾಗೆ ಪ್ರೀತಿಸಲು ಸಾಧ್ಯವಾದರೆ ಪ್ರೀತಿಸು'[೫] ಎಂದು ತನ್ನ ಮಗಳಿಗೆ ಪ್ರೇಮದ ಮೊದಲ ಪಾಠವನ್ನು ಹೇಳಿಕೊಡುತ್ತಾನೆ. ಮೂಲತಃ ಚಿಪಗೇರಿಯವನಾದ ಅವನು ಊರು ಮುಳುಗಡೆಯಾದಾಗ ಊರೂರು ಅಲೆಯುತ್ತಾ ಮರೇಹಳ್ಳಿಗೆ ಬಂದು ಅಲ್ಲೇ ನೆಲೆ ನಿಲ್ಲುತ್ತಾನೆ. ಅಲ್ಲೇ ಮದುವೆಯಾಗುತ್ತಾನೆ. ನಂತರ ಹುಟ್ಟುವ ಮಗಳಿಂದ (ಕಥಾನಾಯಕಿ) ಅವನ ಬದುಕಿನಲ್ಲಿ ಬದಲಾವಣೆಯಾಗುತ್ತದೆ. ಮಗಳೇ ಅವನ ಪಾಲಿಗೆ ಪ್ರಪಂಚವಾಗುತ್ತಾಳೆ.

ಮದುವೆಗೆ ಮುನ್ನವೇ ಮುಕುಂದನೊಂದಿಗೆ ದೈಹಿಕ ಸಂಬಂಧ ಹೊಂದುವ ಮಗಳು ಗರ್ಭಿಣಿಯಾದಾಗ ಅವಳ ತಾಯಿ ರೌದ್ರಾವತಾರ ತಾಳಿ ಕೂಗಾಡುತ್ತಾಳೆ. ಆದರೆ ತಂದೆ ತುಂಬಾ ಸಂಯಮ ಸಮಚಿತ್ತದಿಂದ ವರ್ತಿಸುತ್ತಾನೆ. ಅಪ್ಪಿ ತಪ್ಪಿಯೂ ಅವಳ ಗರ್ಭ ತೆಗೆಸುವ ಬಗ್ಗೆ ಮಾತಾಡುವುದಿಲ್ಲ. ತೋಟದ ಮನೆಗೆ ಅವಳನ್ನು ಕರೆದೊಯ್ದು ಅವಳ ಹೆರಿಗೆಗೆ ಸಕಲ ವ್ಯವಸ್ಥೆ ಮಾಡುತ್ತಾನೆ. ದಿನಗಳು ತುಂಬಿದಂತೆಲ್ಲಾ ಒಬ್ಬ ಸೂಲಗಿತ್ತಿಯನ್ನು ಕರೆತರುತ್ತಾನೆ. ಇವೆಲ್ಲವನ್ನು ಹೆಂಗಸರಿಗಿಂತ ಅಚ್ಚುಕಟ್ಟಾಗಿ ಮಾಡುತ್ತಾನೆ. ಒಂದು ಬೆಳಗಿನ ಜಾವ ಮಗು ಜನಿಸುತ್ತದೆ. ತಾಯಿ ಮಗುವಿನೊಂದಿಗೆ ತಾನೂ ಮುಕುಂದನ ಆಗಮನಕ್ಕಾಗಿ ಕಾಯುತ್ತಾನೆ. ಆ ನಂತರ ಮರೇಹಳ್ಳಿಗೆ ಬರುವ ಮುಕುಂದನೊಂದಿಗೆ ಮಗಳ ಮದುವೆ ನೆರವೇರಿಸುತ್ತಾನೆ. ಅಲ್ಲಿಗೆ ತನ್ನ ಜವಬ್ದಾರಿ ಮುಗಿಯಿತು ಎಂಬ ಭಾವ ಅವನಲ್ಲಿ ಮೂಡುತ್ತದೆ. ಮಗಳಿಗೆ ಪತ್ರ ಬರೆದಿಟ್ಟು 'ನನ್ನ ಜವಬ್ದಾರಿ ಮುಗಿಯಿತು. ತಂದೆಯಾಗುವ ಅವಕಾಶ ಕೊಟ್ಟದಕ್ಕೆ ನಿನಗೆ ಋಣಿ' ಎಂದು ಬರೆಯುವ ಅವನು ಪತ್ರದಲ್ಲಿ ತನ್ನ ಮಗಳ ಜನ್ಮದಾತ ತಾನಲ್ಲ ಎಂಬುದನ್ನು ತಿಳಿಸುತ್ತಾನೆ. ನಂತರ ಎಲ್ಲವನ್ನು ತೊರೆದು ಊರು ಬಿಟ್ಟು ಹೊರಟು ಹೋಗುತ್ತಾನೆ. ನಂತರ ಮರೇಹಳ್ಳಿಯ ಜನ ಅವನನ್ನು ನೋಡುವುದಿಲ್ಲ. ಹಾಗಾದರೆ ಕಥಾನಾಯಕಿಯ ಜನ್ಮದಾತ ಯಾರು? ಎಂಬ ಪ್ರಶ್ನೆ ಈ ಕಥೆಯಲ್ಲಿ ನಿಗೂಢವಾಗಿಯೇ ಉಳಿಯುತ್ತದೆ.

ಈ ಕಥೆಯ ಕಥಾನಾಯಕಿಯ ಪ್ರಿಯತಮ **'ಮುಕುಂದ'**ನದು ಮತ್ತೊಂದು ಮುಖ್ಯಪಾತ್ರ. ಓದಿನಷ್ಟೇ ಶ್ರದ್ಧೆಯಿಂದ ಕೊಳಲು ನುಡಿಸುವುದನ್ನು ಕಲಿಯುತ್ತಾನೆ. ಕ್ಯಾಂಪಸಿನಲ್ಲಿ ಯಾರೊಂದಿಗೂ ಮಾತನಾಡುವವನಲ್ಲ. ಸದಾ ಮೌನಿ. ಬೈಕ್ ಮೇಲಿನ ಹುಂಬ ತಿರುಗಾಟ ಅವನಿಗಿಷ್ಟವಾಗುವುದಿಲ್ಲ. ಕಥಾನಾಯಕಿಯನ್ನು ತುಂಬಾ ಪ್ರೀತಿಸುವ ಮುಕುಂದ್ ತನ್ನ ಸಂಬಂಧವನ್ನು ರಹಸ್ಯವಾಗಿಟ್ಟವನಲ್ಲ. ತನ್ನ ರಿಸರ್ಚ್ ಗೈಡ್‌ಗೆ ಅವಳನ್ನು ತನ್ನ ಭಾವೀ ಪತ್ನಿಯೆಂದೇ ಪರಿಚಯಿಸಿರುತ್ತಾನೆ. ಮದುವೆಗೆ ಮುನ್ನವೇ ಅವಳೊಂದಿಗೆ ಮಿಲನಹೊಂದುವ ಮುಕುಂದ, ಕೊಳಲು ಕಲಿಯಲು ಇನ್ನೊಬ್ಬ ಗುರುವನ್ನು ಹುಡುಕಿಕೊಂಡು ಪುಣೆಗೆ ಹೊರಡುತ್ತಾನೆ. ತಾನು ಮತ್ತೆ ಮರೇಹಳ್ಳಿಗೆ ಬಂದು ಸೇರುತ್ತೇನೆ ಎಂಬ ಭರವಸೆ ನೀಡುತ್ತಾನೆ.

ಇತ್ತ ಗರ್ಭಿಣಿಯಾಗುವ ಕಥಾನಾಯಕಿ, ಇದರ ಅರಿವಿಲ್ಲದ ಮುಕುಂದ ಇವರಿಬ್ಬರ ನಡುವೆ ಒಂದು ವರ್ಷ ಸಂಪರ್ಕವೇ ಕಡಿದಿರುತ್ತದೆ. ಕೊಟ್ಟ ಮಾತಿನಂತೆಯೇ ಒಂದು ವರ್ಷದ ನಂತರ ಮುಕುಂದ ಅವಳನ್ನು ಹುಡುಕಿಕೊಂಡು ಮರೇಹಳ್ಳಿಗೆ ಬಂದು ತನ್ನ ಮಗುವನ್ನು ನೋಡಿ ಮೈ ಮರೆಯುತ್ತಾನೆ. ನರಸಿಂಹಸ್ವಾಮಿ ವಿಗ್ರಹದ ಮುಂದೆ ಕಥಾನಾಯಕಿಯನ್ನು ಮದುವೆಯಾಗುತ್ತಾನೆ. ಈ ಕಥೆಯ ಕಥಾನಾಯಕಿ ಹಾಗೂ ಆಕೆಯ ತಂದೆಯ ಪಾತ್ರಗಳಿಗೆ ಹೋಲಿಸಿದರೆ ಮುಕುಂದನ ಪಾತ್ರ ಕೊಂಚ ಮಟ್ಟಿಗೆ ನೀರಸ ಪಾತ್ರವಾಗಿ ಚಿತ್ರಣಗೊಂಡಿದೆ.

ರವಿ ಬೆಳಗೆರೆಯವರ ಮೊದಲ ಪ್ರಕಟಿತ ಕಥೆ (೧೯೭೮-೭೯) 'ಶಾಲಿನಿ'ಯಿಂದ ಹಿಡಿದು ಇತ್ತೀಚಿಗೆ (೨೦೧೦-ಮೇ) ಪ್ರಕಟಗೊಂಡ 'ಬರುವನೇನೇ ಸಖಿ ಚೆಲುವ...' ಕಥೆಗಳ ವರೆಗಿನ ಒಟ್ಟು ಕಥೆಗಳಲ್ಲಿನ ವೈವಿಧ್ಯಮಯ ಪಾತ್ರಗಳ ಚಿತ್ರಣವನ್ನು ಹೀಗೆ ವಿಶ್ಲೇಷಿಸಬಹುದು.

ರವಿ ಬೆಳಗೆರೆಯವರ ಒಟ್ಟಾರೆ ಕಥೆಗಳಲ್ಲಿ ಪಾತ್ರಗಳ ಬಗ್ಗೆ, ಸೃಷ್ಟಿಯ ಹಿಂದಿರುವ ರವಿಯವರ ಬರಹದ ಕೌಶಲ್ಯದ ಬಗ್ಗೆ ಬಂಜಗೆರೆ ಜಯಪ್ರಕಾಶರವರು ಹೀಗೆ ವ್ಯಾಖ್ಯಾನಿಸಿದ್ದಾರೆ...

"ಒಟ್ಟಾರೆಯಾಗಿ ರವಿ ಬೆಳಗೆರೆಯವರ ಎಲ್ಲಾ ಕಥೆಗಳಲ್ಲಿ ಸಾಮಾನ್ಯ ಬದುಕಿನ ಅಂಚುಗಳ ಆಚೆಯೋ, ಈಚೆಯೋ ಇರುವಂತಹವರ ಕಥನಗಳೇ ಹೇರಳವಾಗಿವೆ. ಅವರೆಲ್ಲ ಯಾವ ಯಾವ ಕಾರಣಗಳಿಗಾಗಿಯೋ ಪತಿತರು, ಬಾಧಿತರು, ಸಾಮಾನ್ಯ ಮಧ್ಯಮ ವರ್ಗದ ಬದುಕಿನ ದೃಷ್ಟಿಯಿಂದ ನೋಡಿದರೆ ಆಘಾತಕಾರಿ ಮನಸ್ಥಿತಿಯವರು ಅಥವಾ ನಿಜವಾಗಿ ನೋಡಿದರೆ ಈ ಜಗತ್ತಿನ ವಿದ್ಯಮಾನಗಳ ಅವಿಸಿಟ್ಟ ನಿಜದ ಬಿಂಬಗಳು. ಆಶ್ಚರ್ಯವೆನಿಸುವಷ್ಟು ಸುಂದರವಾಗಿ ರವಿ ಈ ಬದುಕಿನ ವಿವರಗಳನ್ನು ಹೆಣೆಯಬಲ್ಲರು. ಅವರ ಅಧೋಲೋಕದ ವ್ಯಥೆಗಳನ್ನು ಮನ ಮುಟ್ಟುವಂತೆ ದಾಖಲಿಸಬಲ್ಲರು. ಪತ್ರಿಕಾ ಬರಹಗಾರನಾಗಿಯೂ ಬೆಳೆದು ಬಂದ ಲೇಖಕನೊಬ್ಬನಿಗೆ ಸಾಧ್ಯವಾಗುವಂತೆ ವೈವಿಧ್ಯಮಯವಾದ ವಿವರಗಳನ್ನು, ಬದುಕಿನ ರಿವಾಜುಗಳನ್ನು ನಮ್ಮ ಮುಂದೆ ತೆರೆದಿಡಬಲ್ಲರು. ಅವುಗಳನ್ನು ಓದುವಾಗ ಈ ಬಗೆಯ ಜೀವನಾನುಭವಗಳು ತೀರಾ ಮಾಮೂಲಿಯಾಗಿರಬಹುದೇ ಎಂಬಷ್ಟು ನವಿರಾಗಿ, ಸಲೀಸಾಗಿ, ಹಾಗೆಯೇ 'ಹೀಗೂ ಇರುತ್ತದೆಯೇ' ಎಂಬಂತಹ ಆಶ್ಚರ್ಯ ಹುಟ್ಟಿಸುವಂತೆ 'ಮೆಲೋ ಡ್ರಾಮಟಿಕ್' ಆಗಿ ಕೂಡಾ ಬರೆಯಬಲ್ಲ ರವಿ ನಿಜವಾಗಿಯೂ ಅತ್ಯುತ್ತಮ ಕಥೆಗಾರರಾಗಲು ಎಲ್ಲ ಸಂವೇದನೆಗಳನ್ನು ಪಡೆದಿರುವಂತಹವರು"[1] ಎಂದಿದ್ದಾರೆ.

## ಕೊನೆ ಟಿಪ್ಪಣಿ

೧. ರವಿ ಬೆಳಗೆರೆ, ಪಾ.ವೆಂ. ಹೇಳಿದ ಕಥೆ, ಅಭಿನವ ಪ್ರಕಾಶನ, ಬೆಂಗಳೂರು, ೧೯೯೫, ಪುಟ:೨೨

೨. ಅದೇ ಕೃತಿ, ಪುಟ:೨೫

೩. ಅದೇ ಕೃತಿ, ಪುಟ:೨೬

೪. ಅದೇ ಕೃತಿ, ಪುಟ:೨೯

೫. 'ಹಾಯ್ ಬೆಂಗಳೂರ್!' ವಾರಪತ್ರಿಕೆ (ಸೃಷ್ಟಿ–೭೬೨) ಮೇ–೨೭, ೨೦೧೦, ಪುಟ:೦೨.

೬. ಬಂಜಗೆರೆ ಜಯಪ್ರಕಾಶ, ಉಲಿಯ ಉಯ್ಯಲೆ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫, ಪುಟ:೧೪೯.



## ಅಧ್ಯಾಯ ೫

# ರವಿ ಬೆಳಗೆರೆಯವರ ಕಥೆಗಳ ಕಥನ ಕ್ರಮ

'ಅನುಭವದ ಅಭಿವ್ಯಕ್ತಿ ಮಾಧ್ಯಮವಾದ ಭಾಷೆ ನಿರಂತರ ಚಲನಶೀಲವಾದುದು. ಒಬ್ಬ ಕಥೆಗಾರ ಏನು ಹೇಳಬೇಕೆಂದು ನಿರ್ಧರಿಸುವ ಜೊತೆಯಲ್ಲಿಯೇ ಅದನ್ನು ಹೇಗೆ ಹೇಳಬೇಕೆಂದೂ ನಿರ್ಧರಿಸಬೇಕಾಗುತ್ತದೆ. ಅದು ಸೃಜನಶೀಲ ಪ್ರಕ್ರಿಯೆಯ ಗುಣ, ಸೃಜನಶೀಲ ಕಥೆಗಾರ ಯಾವಾಗಲೂ ಅನುಭವ ಹಾಗೂ ಅಭಿವ್ಯಕ್ತಿಗಾಗಿ ಹಂಬಲಿಸುತ್ತಿರುತ್ತಾನೆ. ಜೊತೆಗೆ ಕಥೆಗಳ ಕಲಾತ್ಮಕ ಚೌಕಟ್ಟು ಮತ್ತು ಭಾಷಾ ಸಾಧ್ಯತೆಗಳ ಬಗ್ಗೆ ತನ್ನದೇ ಆದ ಕಲ್ಪನೆಗಳನ್ನು ಇರಿಸಿಕೊಂಡಿರುತ್ತಾನೆ. ಹೀಗಾಗಿ ಭಾಷೆಯ ಕಲಾತ್ಮಕ ಉಪಯೋಗ ಕಥೆಗಾರ ಆಯ್ದುಕೊಂಡ ವಸ್ತುವಿನಲ್ಲಿ ಸಾರ್ಥಕತೆಯನ್ನು ಪಡೆದುಕೊಳ್ಳಬೇಕಾಗುತ್ತದೆ'[೧]

ರವಿ ಬೆಳಗೆರೆಯವರ ಒಟ್ಟು ಕಥೆಗಳ ಕಥನಕ್ರಮವನ್ನು ಮೂರು ಬಗೆಗಳಲ್ಲಿ ವಿಭಾಗಿಸಬಹುದು

೧. ಕಥೆಗಾರ ಕಥೆಯಲ್ಲಿ ಒಂದು ಪಾತ್ರವಾಗಿ ಅಥವಾ ಕಥೆಯ ನಿರೂಪಕನಾ/ಳಾಗಿ ಕಥೆಯನ್ನು ನಿರೂಪಿಸುವ ಕ್ರಮ.

೨. ಕಥೆಯ ಪಾತ್ರಗಳೇ ಮಾತಾಡುತ್ತಾ ಕಥೆಯನ್ನು ನಿರೂಪಿಸುವ ಕ್ರಮ.

೩. ಕಥೆಯ ಒಂದು ಪಾತ್ರ ತನ್ನ ಮನಸ್ಥಿತಿಯನ್ನು ಕಥೆಯ ಮೂಲಕ ನಿರೂಪಿಸುವ ಕ್ರಮ.

ಮೊದಲನೇ ಗುಂಪಿನ ಕಥನಕ್ರಮದಲ್ಲಿ 'ಶಾಲಿನಿ', 'ಕೊನೆ', 'ಬದುಕೊಂದು ಸತತ ಅಭ್ಯಾಸ', 'ಪಾ.ವೆಂ. ಹೇಳಿದ ಕಥೆ', 'ವಂಧ್ಯಾ', 'ದಾರಿ', 'ಹೀಗೊಬ್ಬಳು ಸೀತಾದೇವಿ', 'ನೆರಳು' ಈ ಕಥೆಗಳು ಸೇರ್ಪಡೆಯಾಗುತ್ತವೆ.

ಎರಡನೇ ಗುಂಪಿನಲ್ಲಿ 'ಮಿನಾರುಗಳ ಊರಿನಲ್ಲಿ ಅವರು', 'ಭ್ರೂಣ ಸಂಭಾಷಣೆ', 'ಹೆಣದ ಮನೆಯಲ್ಲಿ', 'ಮೈಕು', 'ಹಂತ', 'ಕತ್ತಲೆ ನೋವು ಮತ್ತು ಹೆಣ', 'ವಿತಥ',

'ವೇಷಗಳು', 'ಮಸೀದಿ ಬಿದ್ದ ಮೂರನೇ ದಿನ', 'ಸತ್ಯಭಾಮೆಯ ತೆಕ್ಕೆಯಿಂದ', 'ಗಿಡ್ಡಾಂಜನೇಯ ಸ್ವಾಮಿ', 'ಬರುವನೇನೇ ಸಖಿ ಚೆಲುವ...' ಕಥೆಗಳು ಸೇರ್ಪಡೆಯಾಗುತ್ತವೆ.

ಮೂರನೇ ಗುಂಪಿನ ಕಥನ ಕ್ರಮದಲ್ಲಿ 'ಕುಹು ಕುಹರ', 'ಪರಿಚಯ', 'ಆಕ್ರಮಣ' ಈ ಕಥೆಗಳು ಸೇರ್ಪಡೆಯಾಗುತ್ತವೆ.

ಮಾಸ್ತಿಯವರ ಕಥೆಗಳ ನಿರೂಪಣಾ ಶೈಲಿಯನ್ನೇ ಹೋಲುವ 'ಪಾ.ವೆಂ. ಹೇಳಿದ ಕಥೆ' ತನ್ನ ವಿಶಿಷ್ಟ ಕಥನ ಕ್ರಮದಿಂದ ಓದುಗರ ಗಮನ ಸೆಳೆಯುತ್ತದೆ. ಕಥೆಯ ನಿರೂಪಕಿ ತನ್ನದೇ ಕಥೆಯನ್ನು ಕಾಲದ ಅಂತರದಿಂದಾಗಿ ಬೇರೊಬ್ಬಳ ಕಥೆಯನ್ನು ಹೇಳುತ್ತಿರುವಂತೆ ಈ ಕಥೆ ನಿರೂಪಿತವಾಗಿದೆ. ಹುಬ್ಬಳ್ಳಿಯ ಬೀದಿಯೊಂದರಲ್ಲಿ ಭೇಟಿಯಾಗುವ ಪಾ.ವೆಂ. ರೊಂದಿಗೆ ಮಾತಾಡುತ್ತಾ, ಮಾತಾಡುತ್ತಾ ಇನ್ನೊಂದು ಬೀದಿಗೆ ತಲುಪುವ ಸಮಯದಲ್ಲಿ ಇಡೀ ಕಥೆಯ ಚಿತ್ರಣ ಅನಾವರಣಗೊಳ್ಳುತ್ತಾ ಹೋಗುತ್ತದೆ. ಕಥೆಯ ನಿರೂಪಕಿಯ ಜೀವನದಲ್ಲಿ ಹಿಂದೆ ಘಟಿಸಿದ ನೆನಪುಗಳನ್ನೇ ಬೇರೊಬ್ಬಳ ಕಥೆ ಎಂಬಂತೆ ಪಾ.ವೆಂ. ರೊಂದಿಗೆ ಹೇಳಿಕೊಳ್ಳುತ್ತಾಳೆ. ಕಥೆಯ ಅಂತ್ಯದಲ್ಲಿ ನಿರೂಪಕಿಯೇ ಕಥಾನಾಯಕಿ ಅಂಬುಜಾ ಎನ್ನುವುದು ಓದುಗರಿಗೆ ತಿಳಿಯುತ್ತದೆ. ಕಥೆಯ ನಿರೂಪಣೆಯಲ್ಲಿ ಬಳಸಿರುವ ಉಪಮೆಗಳಿಂದ ಜೀವಂತಿಕೆಯ ಚಿತ್ರಣ ಓದುಗರಲ್ಲಿ ಮೂಡುತ್ತದೆ.

ಉದಾ. ೧. ಹೆಣದ ಹೊಕ್ಕುಳೊಳಗಿಂದ ಎದ್ದು ಬಂದು ಹುಳುಗಳಂತೆ ಜನವೋ ಜನ.

೨. ಹುಬ್ಬಳ್ಳಿಯ ಯಾವ ರಸ್ತೆಗೆ ಹೋದರೂ ಸ್ಕಡ್ ಬಿದ್ದ ಇಸ್ರೇಲಿನಂತೆ ಗೋಜು ಗಜಿಬಿಜಿ.

೩. ಅಂಬುಜ ಅಳಲಿಲ್ಲ. ಮಾತೇ ಆಡಲಿಲ್ಲ. ಬಿಳಿಯ ಹಾಳೆ ಯೊಂದರಲ್ಲಿ ಸಹಿ ಮಾಡಿದಳು. ಅಲ್ಲಿದ್ದ ಲಾಟೀನಿನ ಮುಂದಿಟ್ಟವಳೇ ತಿರುಗಿಯೂ ನೋಡದೇ ಆ ಮನೆಯಿಂದ ಹೊರಟು ಬಂದಳು. ಪಾಪಗಳನ್ನೆಲ್ಲ ಕ್ಷಮಿಸಿ ಹೊರಟು ಹೋದ ಏಸುವಿನಂತೆ!

'ಶಾಲಿನಿ' ಕಥೆಯ ಮುಖ್ಯಪಾತ್ರ 'ಶಾಲಿನಿ'ಯಾದರೂ ಈ ಕಥೆಯ ನಿರೂಪಕ ಆಕೆಯ ಗಂಡ. ಮದುವೆಗಿಂತ ಮುಂಚೆ ಶಾಲಿನಿಯೊಂದಿಗಿನ ಪ್ರೇಮ, ಮದುವೆಯ ನಂತರ ಅವಳೆಡೆಗೆ ಬೆಳೆಯುವ ಅಸಡ್ಡೆ, ಪಕ್ಕದ ಮನೆ ಹುಡುಗಿ ಕುಮುದಾಳ ಮೇಲೆ ಉಂಟಾಗುವ ಮೋಹ ಇವೆಲ್ಲವನ್ನು ಕಥೆಯಾಗಿ ನಿರೂಪಿಸುತ್ತಾನೆ. ತನ್ನ ಬದುಕಿನ ಒಂದು ಭಾಗವನ್ನು ಓದುಗರೆದುರಿಗೆ ಹೇಳುವಂತೆ ಈ ಕಥೆಯಲ್ಲಿ ಕಥನ ಕ್ರಮ ಹೆಣೆಯಲಾಗಿದೆ. ಈ ಕಥೆ ಯಾವುದೇ ಪೂರ್ವ ಪೀಠಿಕೆ ಇಲ್ಲದೇ ದಿಢೀರನೇ ಸಂಭಾಷಣೆಯಿಂದಲೇ ಶುರುವಾಗುತ್ತದೆ. ಕಥೆಯ ಆರಂಭದ ಸಾಲು ಶುರುವಾಗುವುದು ಹೀಗೆ...

"ಈ ಕಥೆ ಓದ್ತಾ ಇದ್ದರೆ ಯಾರೋ ನಮ್ಮ ಮಾತೆಲ್ಲಾ ಕದ್ದು ಕೇಳಿ ಬರೆದು ಬಿಟ್ಟಿದ್ದಾರೆ ಅನ್ಸುತ್ತೆ ಅಲ್ವಾ? ಶಾಲಿನಿ ದೊಡ್ಡ ಕಣ್ಣರಳಿಸಿ ಕೇಳಿದ್ದಳು. ಮನಸ್ಸಿನಲ್ಲೇ ನಗುತ್ತಾ ಉತ್ತರಿಸಿದ್ದೆ 'ಹೌದು ನನಗೂ ಹಾಗೇ ಅನ್ನಿಸ್ತು ಓದಿದಾಗ".[2]

ಹೀಗೆ ಈ ಕಥೆಯ ನಿರೂಪಣೆ ಮೊದಲ ಸಾಲಿನಲ್ಲೇ ಓದುಗನ ಗಮನ ಸೆಳೆಯುತ್ತದೆ. ಕಥೆಯ ನಿರೂಪಕ ಕಥೆಯುದ್ದಕ್ಕೂ ತನ್ನ ಕ್ರಿಯೆಗಳು, ವರ್ತನೆಗಳನ್ನು ಓದುಗರೆದುರಿಗೆ ವಿವರಿಸುವ ಶೈಲಿಯಲ್ಲಿ ಈ ಕಥೆ ರಚನೆಯಾಗಿದೆ.

'ಕೊನೆ' ಕಥೆಯಲ್ಲಿ ಕಥೆಯ ನಾಯಕನೇ ಕಥಾ ನಿರೂಪಕ. ತನ್ನ ಬದುಕಿನಲ್ಲಿ ನಡೆದು ಹೋದ ಪ್ರೇಮದ ನೆನಪನ್ನು ವಿವರಿಸುವ ಶೈಲಿ ಈ ಕಥೆಯಾಗಿ ಮೂಡಿ ಬಂದಿದೆ. ಮೊದಲ ನೋಟದಲ್ಲೇ ಪ್ರೇಮ ಉಂಟಾಗುವ ಪರಿಯನ್ನು ರವಿಯವರು ತುಂಬಾ ನಾಟಕೀಯವಾಗಿ ನಿರೂಪಿಸಿದ್ದಾರೆ. ಆ ನಿರೂಪಣೆಯಲ್ಲೇ ಪ್ರೇಮಿಯೊಬ್ಬನ ಅಂತರಂಗದ ಭಾವನೆಗಳ ತಾಕಲಾಟಗಳನ್ನು ಇಲ್ಲಿ ಯಶಸ್ವಿಯಾಗಿ ಚಿತ್ರಿಸಿದ್ದಾರೆ. ನಿರೂಪಕನ ಪ್ರೇಯಸಿಯ ಸೌಂದರ್ಯವನ್ನು ವಿವರಿಸುವಲ್ಲಿ ರವಿಯವರ ರೋಮ್ಯಾಂಟಿಕ್ ಶೈಲಿಯ ಬರಹ ಕಥೆಯಲ್ಲಿ ವಿಜೃಂಭಿಸಿದೆ.

ಉದಾ: ಅಂಥ ನಿರುಪದ್ರವಕಾರಿ ನಿರಾತಂಕ ಜೀವನ ಪ್ರಾರಂಭಿಸಿದ ಕೆಲವೇ ದಿನಗಳಲ್ಲಿ ನನ್ನ ಕಣ್ಣಿಗೆ ಬಿದ್ದವಳು ಜೋಸೆಫೀನ್. ಅದಕ್ಕೂ ಮುಂಚೆ ನನ್ನ ಕಣ್ಣಿಗೆ ಬಿದ್ದದ್ದು ಅವಳ ಮೊಣಕಾಲು. ಒಂದೇಟಿಗೆ ಎದ್ದು ನಿಂತುಬಿಟ್ಟೆ, ಒಂದೇ ಒಂದು ಚಿಕ್ಕ ಮುದುರು, ಮಡತೆ, ಗಂಟು, ಕಡೆಗೆ ಒಂದು ಗೀರೂ ಇಲ್ಲದ ಇಂಥ ನುಣುಪಾದ ಮಂಜುಗಡ್ಡೆಯಂಥ ಮೊಳಕಾಲನ್ನು ನಾನು ದೇವರಾಣೆಗೂ ನೋಡಿರಲಿಲ್ಲ. ಅದನ್ನು ಕಡು ಗುಲಾಬಿ ಬಣ್ಣದ ಸ್ಕರ್ಟಿನ ಫ್ರಿಲ್ಲುಗಳು ವಿಪರೀತ ಸಂಕೋಚದಿಂದ ಮುಚ್ಚಿದ್ದವು. ಅಂಥ ಮೊಳಕಾಲು ನೋಡಿದ ಮೇಲೆ ಅವುಗಳ ಒಡತಿಯ ಮುಖ ನೋಡದಿದ್ದರೆ ದೇವರು ಮೆಚ್ಚಿಯಾನೆಯೇ? ನನ್ನ ಕಿಟಕಿಯ ಮುಂದೆ ನಿಂತಿದ್ದವಳನ್ನು ಅದೇ ಕಿಟಕಿಯ ಮೇಲ್ಭಾಗದಿಂದ ಇಣುಕಿ ನೇರವಾಗಿ ನೋಡಿದೆ.

ನಿಮ್ಮ ಮೇಲಾಣೆ!

ಜಗತ್ತಿನ ಯಾವ ಹೆಂಗಸೂ ಮತ್ಯಾವ ಗಂಡಸಿಗೂ ಅಷ್ಟೊಂದು ಹುಚ್ಚನ್ನು ಅದರಲ್ಲೂ ನೋಡಿದ ಮೊದಲ ಕ್ಷಣದಲ್ಲೇ ಹಿಡಿಸಿರಲಿಕ್ಕಿಲ್ಲ. ಅವಳ ತಿಳಿ ಜೇನು ಬಣ್ಣದ ಕಂಗಳಲ್ಲಿ ನವಿಲು ಕುಣಿಯುತ್ತಿದ್ದವು. ಎದೆಗಳು ಅನಂತ ಕಾಲದಿಂದ ಖನನಕ್ಕಾಗಿ ಕಾಯುವ ಶಿಖರಗಳಂತೆ ಸ್ಥಿರಗೊಂಡಿದ್ದವು. ಮಸ್ತಾದ ಜಡೆಯಾಗಬಹುದಾದ ತಲೆಗೂದಲು ಬೆನ್ನ ಮೇಲೆ ಹರಡಿ ಜಲಪಾತಗಳಂತೆ ಇಳಿಬಿದ್ದಿದ್ದವು. ಹೆಂಗಸೆಂದರೆ ಹೀಗಿರಬೇಕು ಎಂಬ ಭಾವನೆ ಮೂಡಿಬಂದ ಬೆನ್ನಲ್ಲೇ ಇಂಥ ಹೆಂಗಸೂ ಇರಲು ಸಾಧ್ಯವೇ ಎನ್ನಿಸಿ ಏನೂ ಮಾಡಲು ತೋಚದೇ ಅದೊಂದು ವಿಚಿತ್ರವಾದ ದನಿ ಹೊರಡಿಸಿ ಖವ್ವೋ...ಖವ್ವೋ... ಎಂದು ಕೆಮ್ಮಿ ಬಿಟ್ಟೆ.

ಆಗ ನೋಡಿದಳು ಜೋಸೆಫೀನ್"[3]

ಹೀಗೆ ಕಥೆಯ ನಿರೂಪಣೆಯೇ ಪ್ರೇಮದ ನವಿರಾದ ಭಾವನೆಗಳನ್ನು ಅಭಿವ್ಯಕ್ತಿಸಿದೆ. ಕಥೆಯ ನಿರೂಪಕ ಇಲ್ಲಿ ಬಳಸಿರುವ ಉಪಮೆಗಳನ್ನು ಗಮನಿಸಿದಾಗ ಅವನ ಮನಸ್ಸಿನ ಪ್ರೇಮದ ಉತ್ಕಟತೆಗಳು ಕಾಣಿಸುತ್ತವೆ. ಕಥೆಯ ಉತ್ತರಾರ್ಧದಲ್ಲಿ ಕಥೆಗೆ ತಿರುವು ನೀಡುವ ಪಾತ್ರವಾಗಿ ಅಜಯ್‌ಕುಮಾರ ಪಾಟೀಲ ಪಾತ್ರ ಪ್ರವೇಶವಾಗುತ್ತದೆ. ಕಥೆಯ ಅಂತ್ಯ ಅನಿರೀಕ್ಷಿತ ತಿರುವನ್ನು ಪಡೆದುಕೊಳ್ಳುತ್ತದೆ.

'ಬದುಕೊಂದು ಸತತ ಅಭ್ಯಾಸ' ಕಥೆಯ ನಿರೂಪಕ ಕಥಾನಾಯಕನೇ. ಈ ಕಥೆ ಮೂರು ಹಂತಗಳಲ್ಲಿ ನಡೆಯುತ್ತದೆ. ಮೊದಲ ಹಂತದಲ್ಲಿ ಕಥಾನಾಯಕ ರಾಜ್, ತಾನು ತನ್ನ ಪ್ರೇಯಸಿಯೊಂದಿಗಿನ ಪ್ರೇಮದ ಒಡನಾಟ, ಕುಟುಂಬದೊಂದಿಗಿನ ಪ್ರೀತಿ ತನ್ನ ಆರೋಗ್ಯಕರ ದಿನಗಳನ್ನು ಕಥೆಯ ಮೂಲಕ ವಿವರಿಸುತ್ತಾನೆ. ಎರಡನೇ ಹಂತದಲ್ಲಿ ತನ್ನ ದೇಹಕ್ಕೆ ತೊನ್ನು ಹರಡಲು ಪ್ರಾರಂಭಿಸಿದಾಗ ತನ್ನ ಕುಟುಂಬದೊಂದಿಗೆ ಉಂಟಾಗುವ ಅಂತರ ಹಾಗೂ ಅದರಿಂದಲೇ ದೂರಾಗುವ ಪ್ರೇಯಸಿ, ತೊನ್ನಿನಿಂದ ಅನುಭವಿಸುವ ಮಾನಸಿಕ ವೇದನೆಗಳು ಇವೆಲ್ಲವನ್ನು ನಿರೂಪಕ ನಿರೂಪಿಸುತ್ತಾನೆ. ಮೂರನೇ ಹಂತದಲ್ಲಿ ನಿರೂಪಕನ ಜೀವನದಲ್ಲಿ ಪ್ರವೇಶವಾಗುವ ವೀಣ ಅವನ ಬದುಕಿನಲ್ಲಿ ಭರವಸೆ ತುಂಬುವ ಬಗೆ, ನಿರೂಪಕ ಮತ್ತೇ ತನ್ನ ಕೀಳರಿಮೆಯಿಂದ ಹೊರಬರುವ ಚಿತ್ರಣವನ್ನು ಕಥೆಯ ನಿರೂಪಕ ಕಥಾನಾಯಕನಾಗಿ ತನ್ನ ಜೀವನದಲ್ಲಿ ಹಿಂದೆ ನಡೆದಿದ್ದನ್ನು ವರ್ತಮಾನದಲ್ಲಿ ಹೇಳುತ್ತಾ ಹೋಗುವ ಕ್ರಮದಲ್ಲಿ ಈ ಕಥೆಯ ಕಥನಕ್ರಮ ಮೂಡಿಬಂದಿದೆ.

'ವಂಧ್ಯಾ' ಕಥೆಯಲ್ಲಿ ಕಥಾನಾಯಕಿಯೇ ಕಥೆಯ ನಿರೂಪಕಿ. ಕಥಾನಾಯಕಿ ಪೂರ್ಣಿ ಹದ್ದುಗಳೊಂದಿಗೆ ತನಗಿರುವ ಗೆಳೆತನ ಹಾಗೂ ಅವುಗಳೊಂದಿಗಿನ ಮಾತುಕತೆಯನ್ನು ಕಥೆಯ ಮೂಲಕ ನಿರೂಪಿಸುತ್ತಾಳೆ. ಹಂತ ಹಂತವಾಗಿ ಅವಳು ಹದ್ದಾಗುವ ಚಿತ್ರಣವನ್ನು ರವಿಯವರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಉದಾ: ಪೂರ್ಣಿ ತಾನು ಹದ್ದಾಗಿ ಪರಿವರ್ತತೆ ಹೊಂದುವುದನ್ನು ನಿರೂಪಿಸುವ ಶೈಲಿ.

"ದಿನಗಳೆದಂತೆಲ್ಲಾ ಕಾಲು ಕಡ್ಡಿಯಾದವು. ನಾನು ನಡೆದರೆ ಹಕ್ಕಿ ತೊನೆದಂತೆ ಕಾಣಿಸುತ್ತಿತ್ತು. ಎದೆ ಗೂಡು ಉಬ್ಬಿಕೊಂಡು ಬಾಗಿ ಗಡಿಗೆಯಂತಾಯಿತು. ಕಾಲ ಚರ್ಮ ತೆಳ್ಳಗಾಗಿ ಗುಬ್ಬಿ ಗೋಣಿನಂತೆ ಅದರ ತುಂಬ ಬರೀ ಕೂದಲು ಹುಟ್ಟಿಕೊಂಡವು. ನನ್ನ ಕಣ್ಣು ಚಿಕ್ಕದಾಗತೊಡಗಿದವು. ಕಣ್ಣ ನಡುವಿನ ಕರಿಗುಡ್ಡೆ ಕೆಂಡದ ಬಣ್ಣಕ್ಕೆ ತಿರುಗಿತು. ಮೂಗು ಮತ್ತೂ ಎತ್ತರಕ್ಕೆ ಎದ್ದು ಮುಂದಕ್ಕೆ ಬಾಗತೊಡಗಿತು."[೪]

ಹೀಗೆ ಕಥೆಯಲ್ಲಿಯ ನಿರೂಪಣೆ ವಾಸ್ತವವೇನೋ ಎನ್ನುವಷ್ಟರ ಮಟ್ಟಿಗೆ ನೈಜವಾಗಿ ಚಿತ್ರಣಗೊಂಡಿದೆ. ಈ ಕಥೆಯ ಪ್ರಾರಂಭದಿಂದಲೂ ಪೂರ್ಣಿಯೇ ಕಥೆಯನ್ನು ನಿರೂಪಿಸುತ್ತಾಳಾದರೂ, ಅವಳು ಪೂರ್ಣ ಪ್ರಮಾಣದ ಹದ್ದಾಗಿ ಹಾರಿ ಹೋದ ನಂತರ

ಇಲ್ಲಿ ಕಥೆಗಾರರೇ ಕಥೆಯ ಹೊರಗೆ ನಿಂತು ಕಥೆ ನಿರೂಪಿಸುತ್ತಾ ಕಥೆಯನ್ನು ಮುಕ್ತಾಯಗೊಳಿಸುತ್ತಾರೆ.

'ದಾರಿ' ಕಥೆ ನಿರೂಪಣೆಯಾಗುವುದು ಕಥೆಯ ಕಥಾನಾಯಕ 'ಮಂಜ'ನಿಂದ. ಹೋಟೆಲ್ ಮಾಣಿಯಾಗಿರುವ ನಿರೂಪಕ ಮಂಜ ಹೋಟೆಲ್‌ನಲ್ಲಿ ತಾನು ಅನುಭವಿಸಿದ ಹಿಂಸೆ, ಶೋಷಣೆಗಳನ್ನು ಈ ಕಥೆಯ ಮೂಲಕ ವಿವರಿಸುತ್ತಾನೆ. ಮೊದಲು ಹಾಸನದ ಹೋಟೆಲ್‌ನ ಕಥೆಯನ್ನು ವಿವರಿಸುವ ನಿರೂಪಕ ನಂತರ ಹುಬ್ಬಳ್ಳಿಯ ಸರಿತಾ ಹೋಟೆಲಿನ ವ್ಯಥೆಯನ್ನು ನಿರೂಪಿಸುತ್ತಾನೆ. ಕಥೆಯ ಇತರ ಪಾತ್ರಗಳೊಂದಿಗೆ ನಿರೂಪಕ ಸಂಭಾಷಿಸುತ್ತಾನಾದರೂ, ಹೆಚ್ಚಾಗಿ ತನ್ನೊಳಗೆ ತಾನು ಮನಸ್ಸಿನಲ್ಲಿಯೇ ಮಾತಾಡಿಕೊಳ್ಳುತ್ತಾನೆ.

ಉದಾ: "ಹಾಗೆ ನೋಡಿದರೆ ನನ್ನದು ಬೆಂಗಳೂರಿನ ಬಳಿ ಮಾಗಡಿ. ನನ್ನ ಅಪ್ಪ ಬಹುಶಃ ಬ್ರಾಹ್ಮಣ ಇದ್ದಿರಬೇಕು. ಹಾಗೆಂದು ಅವರಿವರು ಹೇಳುತ್ತಿದ್ದರು. ನನ್ನ ಅಮ್ಮನನ್ನು ಮಡಗಿಕೊಂಡಿದ್ದ ಅವನು ಯಾವನಾದರೇನಂತೆ? ಅವನ ಜಾತಿಯ ಬಗ್ಗೆಯಷ್ಟೇ ಅಲ್ಲ ನನ್ನ ಹುಟ್ಟಿನ ಬಗ್ಗೆ ಸಹ ನಾನೆಂದಿಗೂ ಗಂಭೀರವಾಗಿ ಯೋಚಿಸಿರಲಿಲ್ಲ, ಆದರೆ ಯಾರಾದರೂ ನನ್ನನ್ನು 'ಸೂಳೆ ಮಗನೆ' ಎಂದು ಬಯ್ದಾಗ ಸಿಟ್ಟು ಬರುತ್ತಿತ್ತು. ಅಷ್ಟೇ. ಏನೂ ಮಾಡಲಾಗುತ್ತಿರಲಿಲ್ಲ."[೫]

ಹೀಗೆ ನಿರೂಪಕ ತನ್ನ ಮನಸ್ಸಿನೊಳಗಿನ ಮಾತುಗಳನ್ನು, ತನ್ನ ಅಸಹಾಯಕತೆಯನ್ನು ಹೇಳಿಕೊಳ್ಳುತ್ತಾನೆ. ಹೋಟೆಲ್ ಮ್ಯಾನೇಜರ್ ಪಟ್ಟಣಶೆಟ್ಟಿಯ ವಿಕೃತ ಸಲಿಂಗ ಕಾಮಕ್ಕೆ ಬಲಿಯಾಗುವ ಚಿತ್ರಣ ಹಾಗೂ ನಂತರ ಕಥಾನಾಯಕ ಅನುಭವಿಸುವ ಹಿಂಸೆ, ಮಾನಸಿಕ ವೇದನೆ ಇವುಗಳನ್ನೆಲ್ಲಾ ಬೆಳಗೆರೆಯವರು ಪರಿಣಾಮಕಾರಿಯಾಗಿ ಮಂಜನ ಪಾತ್ರದ ಮೂಲಕ ನಿರೂಪಿಸಿದ್ದಾರೆ.

'ಹೀಗೊಬ್ಬಳು ಸೀತಾದೇವಿ' ಕಥೆಯಲ್ಲಿ ಕಥಾನಾಯಕಿ 'ಸೀತಾದೇವಿ'ಯಾಗಿದ್ದರೂ ಕಥೆಯನ್ನು ನಿರೂಪಿಸುವವಳು ಅವಳ ಸ್ನೇಹಿತೆ 'ಅಪರ್ಣಾ'. ಈಕೆಯೇ ಈ ಕಥೆಯ ನಿರೂಪಕಿ. ಸೀತಾದೇವಿಯ ಸ್ವಭಾವ, ವರ್ತನೆಯನ್ನು ಕಥೆಯುದ್ದಕ್ಕೂ ನಿರೂಪಿಸುತ್ತಾ ಹೋಗುತ್ತಾಳೆ. ತನ್ನ ಪ್ರಿಯಕರನ ಬಗ್ಗೆ ನಿರೂಪಕಿಗೆ ಹೇಳುವ ಸೀತಾದೇವಿ, ನಿರೂಪಕಿ ಮತ್ತೇ ಅದನ್ನು ಓದುಗರಿಗೆ ಹೇಳುತ್ತಿರುವಂತೆ ಈ ಬಗೆಯ ಈ ಕಥೆಯಲ್ಲಿ ಮೂಡಿಬಂದಿದೆ.

ಉದಾ: ಸೀತಾದೇವಿ ನಿರೂಪಕಿಗೆ ಹೇಳುವ ಮಾತುಗಳು.

"ಬಂಜಾರ ಹಿಲ್ಸ್ ಕಣೇ... ಅಪರ್ಣಾ! ಇಡೀ ಸಾಯಂಕಾಲ ಆ ಮುಳುಗೋ ಸೂರ್ಯನನ್ನು ಅಂಗೈಯಲ್ಲಿಟ್ಟುಕೊಂಡು ಅವ್ನ ಜೊತೆ ಅಲೀತಿದ್ದೆ. ಹಾವು ಹಾದೀಲಿ ಬೈಕು ಹ್ಯಾಗೆ ಓಡಿಸ್ತಾನೆ ಗೊತ್ತೇನೇ? ಬೆನ್ನು ಕಚ್ಚಿ ಕೂತ್ಕೊಂಡ್ರೆ ಸ್ವರ್ಗಕ್ಕೂ ನನಗೂ ಒಂದೇ ಬಸ್‌ಸ್ಟಾಪಿನಷ್ಟು ದೂರ! ವಾಟ್ ಆ್ಯನ್ ಎಕ್ಸೈಟ್‌ಮೆಂಟ್!" ಕಡಿಮೆ ಸಕ್ಕರೆಯ ಕಾಫೀ

ಹೀರುತ್ತಾ ಅರಳು ಕಂಗಳಲ್ಲಿ ಬಂಜಾರ ಹಿಲ್ಸ್‌ನ ಸಂಜೆಗಳನ್ನು ವಿವರಿಸುತ್ತಿದ್ದ ಸೀತಾದೇವಿಯ ಮುದುಡಿದ ಚೂಡೀದಾರ್ ಅಂಚುಗಳನ್ನು ಗಮನಿಸುತ್ತಾ ಕೂಡುತ್ತಿದ್ದೆ."[೬]

ಈ ಮೇಲಿನ ನಿರೂಪಣೆಯಲ್ಲಿ ಹುಡುಗಿಯೊಬ್ಬಳ ಭಾವೋನ್ಮಾದಗಳು, ಖುಷಿ ಇವನ್ನೆಲ್ಲಾ ನೈಜವಾಗಿ ರವಿಯವರು ಕಟ್ಟಿಕೊಟ್ಟಿದ್ದಾರೆ. ಕಥಾನಾಯಕಿಯ ಚೂಡಿದಾರ್‌ನ ಮುದುಡಿದ ಅಂಚುಗಳನ್ನು ಗಮನಿಸುವ ನಿರೂಪಕಿ, ಇಂತಹ ಸೂಕ್ಷ್ಮ ಅಂಶಗಳನ್ನು ಕೂಡಾ ಕಥೆಯಲ್ಲಿ ಹೆಣೆದಿರುವುದು ಕಥೆಗಾರರ ಕಥನದ ಕುಸುರಿಯ ಕುಶಲತೆಯನ್ನು ತೋರಿಸುತ್ತದೆ. ಕಥೆಯ ನಿರೂಪಕಿ ಅಪರ್ಣಾ ಕಥಾನಾಯಕಿ ಸೀತಾದೇವಿಯ ಮಾತುಗಳಿಗೆ ಪ್ರತಿಯಾಗಿ ಮಾತಾಡುವುದಿಲ್ಲ. ಮಾತಾಡಬೇಕಾದ ಮಾತುಗಳನ್ನು ಕೇವಲ ತನ್ನ ಮನಸ್ಸಿನೊಳಗೆ ಅಂದುಕೊಳ್ಳುತ್ತಾಳೆ. ಈ ಕಥೆಯ ನಿರೂಪಣೆಯುದ್ದಕ್ಕೂ ವ್ಯಾಪಕವಾದ ಇಂಗ್ಲಿಷ್ ಪದಪುಂಜಗಳನ್ನು ರವಿಯವರು ಬಳಸಿದ್ದಾರೆ.

'ನೆರಳು' ಕಥೆಯಲ್ಲಿ ಕಥಾನಾಯಕನೇ ಕಥೆಯ ನಿರೂಪಕ. ಕಥೆಯ ಆರಂಭದಲ್ಲೇ ತನ್ನ ಪುಟ್ಟದಾದ ಬಾಡಿಗೆ ಮನೆಯ ಸ್ಥಿತಿಯ ಚಿತ್ರಣವನ್ನು ನಿರೂಪಕ ಕಟ್ಟಿಕೊಡುತ್ತಾನೆ. ಹೆಂಡತಿ ಮತ್ತು ಪುಟ್ಟ ಮಗುವನ್ನು ಹೊಂದಿದ ನಿರೂಪಕ ಸತ್ತ ತಾಯಿಯ ನೆನಪನ್ನು ನೆನಪಿಸಿಕೊಳ್ಳುತ್ತಾನೆ. ಹಾಗೆಯೇ ಫ್ಲಾಷ್‌ಬ್ಯಾಕ್ ರೀತಿಯಲ್ಲಿ ಕಥೆ ಬಿಚ್ಚಿಕೊಳ್ಳುತ್ತದೆ. ತನ್ನ ತಾಯಿಯ ಬಲವಂತಕ್ಕೆ ಬಿದ್ದು ಮದುವೆಯಾಗುವುದು, ತಾಯಿಯ ಕದಿಯುವ ಮನೋರೋಗ, ಹೆಂಡತಿಯೊಂದಿಗೆ ಕಳೆದುಕೊಂಡ ಸುಖದ ರಾತ್ರಿಗಳು ಇವುಗಳನ್ನೆಲ್ಲಾ ಹೇಳಿಕೊಳ್ಳುತ್ತಾ ಮತ್ತೆ ವರ್ತಮಾನ ಕಾಲಕ್ಕೆ ಬರುತ್ತಾನೆ. ಅಮ್ಮನ ಸ್ವಭಾವ, ವರ್ತನೆಯನ್ನೇ ಹೊತ್ತ ತನ್ನ ಮಗುವಿಗೆ ತಾನು ತನ್ನ ಅಮ್ಮನಿಗೆ ತೋರಿಸಿದ ಹಾಗೆ ನಿರ್ಲಕ್ಷ್ಯ ತೋರಿಸಲಾಗುವುದಿಲ್ಲ ಎಂಬ ಅರಿವು ಆಗುವುದನ್ನು ನಿರೂಪಕ ಇಲ್ಲಿ ಹೇಳಿಕೊಳ್ಳುತ್ತಾನೆ. ತನ್ನ ದೈಹಿಕ ಸುಖಕ್ಕಾಗಿ ಹೆಂಡತಿಯನ್ನು ಸೇರಲು ಕಾತುರನಾದ ನಿರೂಪಕ ತನ್ನ ತಾಯಿಯನ್ನು, ಆಕೆ ಚಳಿಯಲ್ಲಿ ಮಲಗುವುದನ್ನು ನಿರ್ಲಕ್ಷಿಸುತ್ತಾನೆ. ಕೊನೆಗೆ ನಿರೂಪಕನ ತಾಯಿ ಸತ್ತಾಗಲೂ ಅವನ ಮನಸ್ಸು ನಿಷ್ಕ್ರಿಯಗೊಳ್ಳುವ ರೀತಿ ಇವೆಲ್ಲವನ್ನು ನಿರೂಪಕ ಕಥೆಯಲ್ಲಿ ನಿರೂಪಿಸುತ್ತಾನೆ.

'ಮಿನಾರುಗಳ ಊರಿನಲ್ಲಿ ಅವರು', 'ಭ್ರೂಣ ಸಂಭಾಷಣೆ', 'ಹೆಣದ ಮನೆಯಲ್ಲಿ', 'ಮೈಕು', 'ಹಂತ', 'ಕತ್ತಲೆ ನೋವು ಮತ್ತು ಹೆಣ', 'ವಿತಥ', 'ವೇಷಗಳು', 'ಮಸೀದಿ ಬಿದ್ದ ಮೂರನೇ ದಿನ', 'ಸತ್ಯಭಾಮೆಯ ತೆಕ್ಕೆಯಿಂದ', 'ಗಿಡ್ಡಾಂಜನೇಯ ಸ್ವಾಮಿ', 'ಬರುವನೇನೇ ಸಖಿ ಚೆಲುವ...' ಈ ಕಥೆಗಳ ನಿರೂಪಣಾ ಶೈಲಿ ಒಂದೇ ರೀತಿಯಾಗಿದೆ.

ಈ ಕಥೆಗಳಲ್ಲಿ ನಿರೂಪಕ ಕಾಣಿಸಿಕೊಳ್ಳುವುದಿಲ್ಲ. ಪಾತ್ರಗಳೇ ಮಾತಾಡಾತ್ತಾ ಕಥೆಯನ್ನು ನಿರೂಪಿಸುತ್ತವೆ. ಕಥೆಯ ಪಾತ್ರಗಳ ಸಂಭಾಷಣೆ ಮುಗಿದ ನಂತರ ಅದಕ್ಕೆ ಪೂರಕವಾಗಿ ಕಥೆಗಾರರೇ ಕಥೆಯನ್ನು ನಿರೂಪಿಸುತ್ತಾರಾದರೂ ಅವರು ಈ ಕಥೆಯೊಳಗಿನ ನಿರೂಪಕರಲ್ಲ. ಕಥೆಯ ಹೊರಗೆ ನಿಂತು ಕಥೆಯನ್ನು ನಿರೂಪಿಸುತ್ತಾರೆ.

ನಿರೂಪಣೆ ತಂತ್ರದ ದೃಷ್ಟಿಯಿಂದ 'ಮಿನಾರುಗಳ ಊರಿನಲ್ಲಿ ಅವರು' ಹಾಗೂ 'ಸತ್ಯಭಾಮೆಯ ತೆಕ್ಕೆಯಿಂದ' ಕಥೆಗಳು ಉಳಿದೆಲ್ಲಾ ಕಥೆಗಳಿಗಿಂತ ಕೊಂಚ ಮಟ್ಟಿಗೆ ವಿಭಿನ್ನವಾಗಿವೆ. ಹಾಗೂ ನಿರೂಪಣೆಯ ಶೈಲಿ ಕೂಡಾ ಇವೆರಡೂ ಕಥೆಗಳಲ್ಲಿ ಒಂದೇ ರೀತಿ ಇರುವುದನ್ನು ಗಮನಿಸಬಹುದು. ಈ ಎರಡೂ ಕಥೆಗಳಲ್ಲಿಯ ಪಾತ್ರಗಳಿಗೆ ಹೆಸರಿಲ್ಲ. ಕಥಾನಾಯಕನನ್ನು 'ಅವನು (ಆತ)' ಕಥಾನಾಯಕಿಯನ್ನು 'ಅವಳು (ಆಕೆ)' ಎಂದೇ ಈ ಕಥೆಗಳಲ್ಲಿ ಸಂಭೋದಿಸುತ್ತಾರೆ ನಿರೂಪಕರು. ಪಾತ್ರಗಳು ಮಾತನಾಡುವ ಮಾತುಗಳನ್ನು ಹಾಗೂ ಅವರು (ಪಾತ್ರಗಳು) ಹೀಗೆ ಮಾತನಾಡಿದರು ಎಂಬುದನ್ನು ನಿರೂಪಕರು ಕಥೆಯ ಹೊರಗೆ ನಿಂತು ಓದುಗರಿಗೆ ವಿವರಿಸುವ ಶೈಲಿ ಇವೆರಡೂ ಕಥೆಗಳಲ್ಲಿದೆ.

'ಮಿನಾರುಗಳ ಊರಿನಲ್ಲಿ ಅವರು' ಕಥೆಯಲ್ಲಿರುವುದು ಎರಡೇ ಪಾತ್ರಗಳು. ಇಬ್ಬರೂ ಪ್ರೇಮಿಗಳೇ. ಒಂದು ಬೆಳಗಿನ ಜಾವದಿಂದ ಮರುದಿನ ಬೆಳಗಿನ ಜಾವದವರೆಗಿನ ಅವಧಿಯಲ್ಲಿ ಇಡೀ ಕಥೆ ಘಟಿಸುತ್ತದೆ. ಇಬ್ಬರ ನಡುವಿನ ಮಾತುಕತೆಗಳೇ ಇಲ್ಲಿ ಕಥೆಯಾಗಿ ರೂಪಗೊಂಡಿದೆ.

ಕಥಾನಾಯಕ, ನಾಯಕಿಗೆ ಪ್ರಶ್ನೆ ಕೇಳುತ್ತಾನೆ. ಅವಳು ಉತ್ತರಿಸುತ್ತಾಳೆ. ಕಥಾನಾಯಕಿ ನಾಯಕನಿಗೆ ಪ್ರಶ್ನೆ ಕೇಳುತ್ತಾನೆ. ಅವನು ಉತ್ತರಿಸುತ್ತಾನೆ. ಈ ಬಗೆಯ ಪ್ರಶ್ನೋತ್ತರ ಶೈಲಿಯಲ್ಲೇ ಕಥನ ಕ್ರಿಯೆ ನಿರೂಪಿತವಾಗುತ್ತದೆ.

ಉದಾ: ೧. 'ನೀನು ದೇವರನ್ನು ನಂಬುತ್ತಿಯಾ?' ಆತ ಕೇಳಿದ.

'ನಿನ್ನನ್ನು ನಂಬುತ್ತೇನೆ' ಉತ್ತರಿಸಿದಳು.

'ನನ್ನನ್ನು ಎಷ್ಟು ದಿನಾಂತ ಪ್ರೀತಿಸ್ತೀಯ?' ಕೇಳಿದ

೨. 'ನಿನ್ನ ಗಂಡ ಬಡಿಯುತ್ತಾನಾ?' ಅವನು ಕೇಳಿದ

'ಇಲ್ಲ. ಆತ ಒಳ್ಳೆಯವನು ನಾಗರೀಕ ಮನುಷ್ಯ'

೩. 'ನಿನಗೊಂದು ಹೆಸರಿಡಲಾ?' ಅವನೆಂದ.

'ಏನಂತ?'

'ವೆನ್ನೆಲ!'

'ಹಾಗಂದರೆ?'

'ಬೆಳದಿಂಗಳು ಅಂತ. ಹಾಗೇ ಕರೀತಿನಿ. ವೆನ್ನೆಲಾ ಅಂತ!' ಹೀಗೆ ಪ್ರೇಮಿಗಳಿಬ್ಬರ ಪ್ರಶ್ನೋತ್ತರಗಳೇ ಕಥೆಯುದ್ದಕ್ಕೂ ಕಾಣಿಸಿಕೊಂಡಿವೆ. ಆ ಮೂಲಕ ಕಥೆ ನಿರೂಪಿತವಾಗುತ್ತಾ ಹೋಗುತ್ತದೆ.

'ಸತ್ಯಭಾಮೆಯ ತೆಕ್ಕೆಯಿಂದ' ಕಥೆ ಹೆಂಡತಿಯನ್ನು ತೊರೆದು ಪ್ರಿಯತಮೆಯ ತೆಕ್ಕೆಗೆ ಬರುವ ಕಥಾನಾಯಕನ ಚಿತ್ರಣವನ್ನು ಕಟ್ಟಿಕೊಡುವ ಕಥೆಯಾಗಿ ಮೂಡಿಬಂದಿದೆ. 'ಮಿನಾರುಗಳ

ಊರಿನಲ್ಲಿ ಅವರು' ಕಥೆ ಒಂದು ಬೆಳಗಿನ ಜಾವದಿಂದ ಇನ್ನೊಂದು ಬೆಳಗಿನ ಜಾವದವರೆಗೆ ಅಂದರೆ ಒಂದು ದಿನದ ಅವಧಿಯಲ್ಲಿ ನಡೆಯುವ ಕಥೆಯಾಗಿ ಮೂಡಿಬಂದಿದ್ದರೆ, 'ಸತ್ಯಭಾಮೆಯ ತೆಕ್ಕೆಯಿಂದ' ಒಂದು ವರ್ಷದ ಅವಧಿಯಲ್ಲಿ ನಡೆಯುವ ಕಥೆಯಾಗಿದೆ. ಮಾರ್ಚ್ ತಿಂಗಳಲ್ಲಿ ತನ್ನ ಹೆಂಡತಿಯನ್ನು ತೊರೆದು ತನ್ನ ಪ್ರಿಯತಮೆಯ ಸನಿಹಕ್ಕೆ ಬರುವ ಕಥಾನಾಯಕ ಅವಳ ಅತಿಯಾದ, ಉಸಿರು ಕಟ್ಟಿಸುವ ಪ್ರೀತಿ, ತನ್ನ ವರ್ತನೆ, ವ್ಯಕ್ತಿತ್ವಗಳನ್ನೇ ಬದಲಾಯಿಸುವ ಅವಳ ಸತತ ಪ್ರಯತ್ನಗಳು ಇವುಗಳಿಂದ ಬೇಸತ್ತು ಮರು ವರ್ಷದ ಮಾರ್ಚ್ ತಿಂಗಳಲ್ಲಿ ಅವಳಿಂದ ವಿಮುಖ ಹೊಂದಿ ತನ್ನ ಹೆಂಡತಿಯಲ್ಲಿಗೆ ಬರುವ ಕಥೆಯಾಗಿದೆ. ಈ ಒಂದು ವರ್ಷದ ಅವಧಿಯಲ್ಲಿ ಕಥಾನಾಯಕ ಹಾಗೂ ಅವನ ಪ್ರಿಯತಮೆ ಇವರಿಬ್ಬರ ನಡುವಿನ ಮಾತುಗಳನ್ನೇ ಇಲ್ಲಿ ಕಥೆಗಾರರು ಕಥೆಯನ್ನಾಗಿಸಿದ್ದಾರೆ. 'ಮಿನಾರುಗಳ ಊರಿನಲ್ಲಿ ಅವರು' ಕಥೆಯಂತೆಯೇ ಇಲ್ಲಿಯೂ ಕೂಡಾ ಎರಡೇ ಪ್ರಮುಖ ಪಾತ್ರಗಳು. ಕಥಾನಾಯಕ ಹಾಗೂ ಅವನ ಪ್ರಿಯತಮೆ. ಕಥಾನಾಯಕನಿಗೆ ಹೆಂಡತಿ ಇದ್ದರೂ ಅದು ಈ ಕಥೆಯಲ್ಲಿ ಪಾತ್ರವಾಗಿ ಅರಳಿಲ್ಲ. ಈ ಕಥೆಯೂ ಕೂಡಾ ಪ್ರಶ್ನೋತ್ತರ ಶೈಲಿಯಲ್ಲೇ ನಿರೂಪಿತವಾಗುತ್ತದೆ.

ಉದಾ: 'ಹಲೋ...?' ಫೋನ್ ಮಾತಾಡಿತು.

'ಏನು?' ಕೇಳಿದ

'ಏನು ಮಾಡ್ತಿದೀಯ?' ಕೇಳಿದಳು.

''ಕುಡೀತಾ ಇದೀನಿ'

'ಯಾಕೆ?'

'ನನ್ನಿಷ್ಟ!'

ಹೀಗೆ ಕಥೆಯಲ್ಲಿ ಪ್ರಶ್ನೋತ್ತರಗಳೇ ಕಂಡು ಬರುತ್ತವೆ. ಇಲ್ಲಿ ಪ್ರಶ್ನೋತ್ತರಗಳನ್ನು ಹೊರತುಪಡಿಸಿದರೆ ಉಳಿದಂತೆ ಸಂಭಾಷಣೆಗಳೇ ಇಲ್ಲ. ಕಥಾನಾಯಕ ತನ್ನ ಮನಸ್ಸಿನಲ್ಲಿ ಅಂದುಕೊಳ್ಳುವ ಮಾತುಗಳೇ ಇಲ್ಲಿ ಕಥೆಯಾಗಿದೆ.

ಇಬ್ಬರು ಗರ್ಭಿಣಿ ಹೆಂಗಸರ ನಡುವಿನ ಸಂಭಾಷಣೆಯೇ 'ಭ್ರೂಣ ಸಂಭಾಷಣೆ' ಕಥೆಯಾಗಿ ಮೂಡಿಬಂದಿದೆ. ಕಥೆ ಪ್ರಾರಂಭವಾಗುವುದು ಮಟ ಮಟ ಮಧ್ಯಾಹ್ನದಲ್ಲಿ. ಸಂಜೆಯ ಹೊತ್ತಿಗೆ ಕಥೆ ಮುಗಿಯುತ್ತದೆ. ಈ ಮಧ್ಯಾಹ್ನ ಮತ್ತು ಸಂಜೆಯ ನಡುವಿನ ಅವಧಿಯಲ್ಲೇ ಕಥೆ ನಡೆಯುತ್ತದೆ. ಒಂದು ಮಧ್ಯಾಹ್ನದಲ್ಲಿ ಅಮೀನಾಳನ್ನು ಭೇಟಿಯಾಗುವ ವಸಂತ ತನ್ನ ಗರ್ಭದ ಬಗ್ಗೆ, ತನ್ನ ಬಗ್ಗೆ ಪ್ರಶ್ನೆ ಕೇಳುತ್ತಾಳೆ. ಅಮೀನಾ ಉತ್ತರಿಸುತ್ತಾಳೆ. ಇವರಿಬ್ಬರ ಮಾತಿನ ನಡುವೆಯೇ ಭ್ರೂಣವೂ ಮಾತಾಡುತ್ತದೆ. ೨೦ ವರ್ಷಗಳ ಹಿಂದೆ ಆಡಾಡುತ್ತಾ ಸತ್ತ ಆರು ವರ್ಷದ ಕಂದ ಇರ್ಫಾನನ ಗೋರಿ ಕೂಡಾ ಕಥೆಯ ಒಂದು

ವಿಶಿಷ್ಟ ಭಾಗವಾಗಿದೆ. 'ಬದುಕಿದ್ದರೆ ಇರ್ಫಾನ ಅಜ್ಜನಾಗಿ ೭೬ರ ಮುದಿ ಬೆನ್ನು ಬಾಗಿಸಿಕೊಂಡು ಓಡಾಡುತ್ತಿದ್ದ' ಎಂಬ ಸಾಲಿನಲ್ಲೇ ಕಥೆಗಾರರು ಗೋರಿಯೊಳಗಿರುವ ಅಗೋಚರ ವ್ಯಕ್ತಿಯ ಚಿತ್ರಣವನ್ನು ಓದುಗರಿಗೆ ಕಟ್ಟಿಕೊಡಲು ಪ್ರಯತ್ನಿಸಿರುವುದು ಕಾಣಿಸುತ್ತದೆ. ಅಮೀನಾಳ ಗರ್ಭದೊಳಗಿನ ಭ್ರೂಣ ಗೋರಿಯೊಳಗಿನ ಇರ್ಫಾನನೊಂದಿಗೆ ಮಾತನಾಡುವ ಸನ್ನಿವೇಶಗಳು ಕಥೆಗೆ ಮಾಂತ್ರಿಕ ಸ್ಪರ್ಷ ನೀಡಿದೆ. ಎದೆಗೆ ಸರಪಳಿ ಸುತ್ತಿಕೊಂಡು, ತೋಳಿಗೆ ಕಬ್ಬಿಣದ ಬಳೆ ಧರಿಸಿರುವ ಫಕೀರ ಅಮೀನಾಳೊಂದಿಗೆ ದೈಹಿಕ ಮಿಲನ ಹೊಂದುವ ಸನ್ನಿವೇಶವನ್ನು ಅಶ್ಲೀಲತೆಯ ಸೋಂಕಿಲ್ಲದೆ, ಒಂದೆರಡೇ ಸಾಲಿನಲ್ಲಿ ಹೀಗೆ ನಿರೂಪಿಸುತ್ತಾರೆ.

'ಹಸಿದು ಬಂದವನಿಗೆ ಊಟವಿಕ್ಕಿದಳು. ಅದು ಬೇಕು ಅಂದ. ಅಮೀನಾ ಇಲ್ಲವೆನ್ನಲಿಲ್ಲ. ತೋಳಿಗೆ ಕಬ್ಬಿಣದ ಬಳೆ ತೊಟ್ಟ ಫಕೀರ, ಅವಳ ಬಂದಿಯಾದಾಗ, "ನನಗೆ ಕಂದ ಬೇಕು!" ನಡುಗುವ ದನಿಯಲ್ಲಿ ಹೇಳಿದ್ದಳು ಅಮೀನಾ. ಅವನು ಉನ್ಮತ್ತನಾದ, ಕಣ್ಣು ಅರೆಬರೆಯಾಗಿ ಮುಚ್ಚಿಕೊಂಡವು. ಮಾತೇ ಆಡದಿದ್ದರೂ ದನಿ ಗದ್ಗದಿತವಾಯಿತು. ಆಗ ಸೃಷ್ಟಿಯಾದ ಭ್ರೂಣವದು'.[೭]

ಕಥೆಯ ಕೊನೆಯ ಭಾಗದಲ್ಲಿ ಮಳೆ ಪ್ರಾರಂಭವಾಗುವ ಸನ್ನಿವೇಶದಲ್ಲಿ 'ಮಳೆಯ ಮೊದಲ ಹನಿ'ಯನ್ನು ಕೂಡಾ ರವಿಯವರು ತಮ್ಮ ಒಳಗಣ್ಣಿಂದ ನೋಡಿ ಅದಕ್ಕೆ ಉಪಮೆ ಬಳಸಿ ಅದರ ಸೌಂದರ್ಯವನ್ನು ಹೆಚ್ಚಿಸಿರುವುದು ಹೀಗೆ.

"ಭೋರೆಂಬ ಮಳೆಯ ಮೊದಲ ಹನಿ ಅಮೀನಾಳ ಕೆನ್ನೆಯ ಮೇಲೆ ಬಿತ್ತು. ದೇವಲೋಕದಿಂದೆಂಬಂತೆ"

ಹೀಗೆ ಒಂದು 'ಮಳೆ ಹನಿ' ಕೂಡಾ ರವಿಯವರ ನಿರೂಪಣೆಯಲ್ಲಿ ತನ್ನ ಸೌಂದರ್ಯವನ್ನು ಹೆಚ್ಚಿಸಿಕೊಂಡಿದೆ.

'ಹೆಣದ ಮನೆಯಲ್ಲಿ' ಕಥೆ ಪೂರ್ತಿಯಾಗಿ ಆಸ್ಪತ್ರೆಯ ಶವದ ಕೋಣೆಯಲ್ಲೇ ನಡೆಯುತ್ತದೆ. ಕಥೆಯ ಆರಂಭದಲ್ಲೇ ಕಥೆಗಾರರು ಕಥಾನಾಯಕ ನಾರಾಣಿಯ ಚಿತ್ರಣವನ್ನು ಚಿತ್ರಿಸುತ್ತಾರೆ. ಸಂಬಂಧಿಗಳ ನೋವು, ಆಸ್ಪತ್ರೆಯ ಸಿಬ್ಬಂದಿಗಳ ಲಂಚದ ದಾಹ, ಆಸ್ಪತ್ರೆಯ ಅವ್ಯವಸ್ಥೆ ಇವುಗಳನ್ನೆಲ್ಲಾ ವಿವರಿಸುತ್ತಾರೆ. ಆಸ್ಪತ್ರೆಯ ಹೊರಗೆ ಬೆಳೆದಿರುವ ಚಿನ್ನಕೇಸರಿ ಗಿಡ ನಾರಾಣಿಯ ಜೀವನದಲ್ಲಿ ನಡೆದು ಘಟನೆಗಳಿಗೆ ಸಾಕ್ಷಿಯಾಗಿ ನಿಂತಿದೆ. ಆಸ್ಪತ್ರೆಯಲ್ಲಿ ಹೆಣ ಕೊಯ್ಯುವ ಕೆಲಸ ನಿರ್ವಹಿಸುವ ನಾರಾಣಿ ತನ್ನ ಗತಕಾಲದ ನೆನಪುಗಳನ್ನು ಕೆದಕಿಕೊಂಡಾಗ ಕಥೆ ಹಿಂದಕ್ಕೆ ಓಡುತ್ತದೆ. ಅವನ ಹೆಂಡತಿಯ ಸಾವು, ಅದರಿಂದ ಅವನು ಪಡುವ ವೇದನೆ ಇವುಗಳನ್ನೆಲ್ಲಾ ನೆನಪಿಸಿಕೊಳ್ಳುತ್ತಾನೆ. ತನ್ನ ಹೆಂಡತಿ ತೀರಿಕೊಂಡಾಗ 'ಡಾಕ್ಟ್ರು ಕೆಂಚಪ್ಪ ಚಿಕ್ಕ ವಯಸ್ಸಿನವನಾಗಿದ್ದ. ಚಿನ್ನ ಕೇಸರಿ ಗಿಡದ ಹಾಗೆ' ಎಂಬ ಹೋಲಿಕೆಯ ವಾಕ್ಯದಲ್ಲಿ ಚಿನ್ನ ಕೇಸರಿ ಗಿಡವೂ ಮಹತ್ವ ಪಡೆದುಕೊಳ್ಳುತ್ತದೆ.

ಮಗುವೊಂದರ ಶವದ ಮೂಗಿನಿಂದ ಸೋರುತ್ತಿರುವ ರಕ್ತವನ್ನು ನಾರಾಣಿ ಒರೆಸುವ ಯಾಂತ್ರಿಕ ಕ್ರಿಯೆಯನ್ನು ಕೂಡಾ ರವಿಯವರು ಉಪಮೆಯನ್ನು ಬಳಸಿ ವಾಕ್ಯದ ಸತ್ವವನ್ನು ಹೆಚ್ಚಿಸಿದ್ದಾರೆ.

ಉದಾ: 'ಅಳುವ ಮಗುವಿನ ಮೂಗಿನಿಂದ ಒರೆಸುವ ಸಿಂಬಳವನ್ನು ಒರೆಸುವ ತಾಯಿಯಂತೆ ಬಲಗೈ ಬೆರಳುಗಳಿಂದಲೇ ಅದರ ಮೂಗಿನ ನೆತ್ತರು ಒರೆಸಿದ ನಾರಾಣಿ'.

ಹೆಣದ ಕೋಣೆಯಲ್ಲಿ ಟ್ಯೂಬ್‌ಲೈಟ್ ಹೊತ್ತಿಕೊಳ್ಳುವ ಬಗೆಯನ್ನು ಕಥೆಗಾರರು ಸೂಕ್ಷ್ಮವಾಗಿ ಗಮನಿಸಿ, ಅದನ್ನು ಕಥೆಯಲ್ಲಿ ಬಳಸಿಕೊಂಡಿರುವ ಬಗೆ ಹೀಗೆ...

"ಎರಡು ಬಾರಿ 'ಕ್ಲಳಕ್' ಎಂದು ಸದ್ದು ಮಾಡಿ ಹತ್ತಿಕೊಂಡ ಟ್ಯೂಬ್ ಲೈಟಿನ ಬೆಳಕಿನಲ್ಲಿ ತಾನು ತೊಳೆದ ಕಟ್ಟೆ ಶುಭ್ರವಾಗಿಯೇ ಎಂಬುದನ್ನು ಪರೀಕ್ಷಿಸುತ್ತಾನೆ."

ವಿಪರೀತ ಲಂಚಕೋರನಾಗಿರುವ ಡಾ. ಕೆಂಚಪ್ಪನ ಸಾವಿನಿಂದ ಕಥೆ ಅಂತ್ಯವಾಗುತ್ತದೆ.

'ಮೈಕು' ಕಥೆಯಲ್ಲಿ ಕಥಾನಾಯಕ ವೀರಸಂಗಪ್ಪ ನಾಗಪ್ಪ ಹೂಗಾರ ಮೈಕ್‌ನಲ್ಲಿ ಹೇಳುವ ಮಾತುಗಳು ಹಾಗೂ ಆ ಮಾತುಗಳಿಗೆ ಕಥೆಗಾರರು ವಿವರಣೆಯನ್ನು ಕೊಡುತ್ತಾರೆ. ಈ ಕಥೆಯಲ್ಲಿ ಕಥಾನಾಯಕ ಮೈಕ್‌ನಲ್ಲಿಯೇ ಮಾತಾಡುತ್ತಾನೆ. ಇತರೆ ಪಾತ್ರಗಳೊಂದಿಗೆ ಮಾತಾಡುವುದಿಲ್ಲ. ಕಥೆಯ ಆರಂಭದಲ್ಲೇ ವಿಚಿತ್ರವಾದ ಅನೌನ್ಸ್‌ಮೆಂಟ್ ಮಾಡುವ ಕಥಾನಾಯಕ ನಂತರ ಅವನ ವರ್ತನೆಯ ಹಿನ್ನೆಲೆ ಏನಿದೆ ಎಂಬುದನ್ನು ತಿಳಿಸಲು ಕಥೆಗಾರರು ಫ್ಲಾಷ್‌ಬ್ಯಾಕ್‌ಗೆ ಹೋಗುತ್ತಾರೆ. ಕಥಾನಾಯಕ ತನ್ನ ಹೆಂಡತಿಯ ಸಾವಿನಿಂದಾಗಿ ವಿಕ್ಷಿಪ್ತನಂತಾಗುವ ಬಗೆಯನ್ನು ಕಥೆಗಾರರೇ ಇಲ್ಲಿ ನಿರೂಪಿಸುತ್ತಾರೆ. ಕಂಟ್ರೋಲ್ ರೂಂ ಗೂ ಲೌಡ್‌ಸ್ಪೀಕರ್‌ಗೂ ಕನೆಕ್ಷನ್ ತಪ್ಪಿಸಿರುವುದನ್ನು ಗೊತ್ತು ಮಾಡಿಕೊಳ್ಳುವ ಕಥಾನಾಯಕ ಬಸ್ಸ್ಟ್ಯಾಂಡನ್ನೇ ತೊರೆದು ಪಾರ್ಕ್‌ನಲ್ಲಿ ಪತ್ರಿಕೆಯನ್ನು ಸುರುಳು ಮಾಡಿ ಮಾತನಾಡಲಾರಂಭಿಸುತ್ತಾನೆ ಎಂಬಲ್ಲಿಗೆ ಕಥೆ ಮುಕ್ತಾಯವಾಗುತ್ತದೆ. 'ಮಂದಿಯಾಕ ಮೊದ್ಲಿನ ಹಂಗೆ ಬರವಲ್ರು?' ಎಂದು ಕಂಟ್ರೋಲರ್ ಸಾಹೇಬರನ್ನು ಕೇಳುವ ಒಂದೇ ಒಂದು ಮಾತನ್ನು ಹೊರತುಪಡಿಸಿದರೆ ಕಥಾನಾಯಕ ಇತರ ಪಾತ್ರಗಳೊಂದಿಗೆ ಮಾತೇ ಆಡುವುದಿಲ್ಲ. ಲೌಡ್‌ಸ್ಪೀಕರ್‌ಗೆ ಕನೆಕ್ಷನ್ ತಪ್ಪಿಸಲಾಗಿತ್ತು ಎಂಬ ಸತ್ಯ ಕಥೆಯ ಕೊನೆಗೆ ಓದುಗರಿಗೆ ಗೊತ್ತಾಗುತ್ತದೆ.

'ಹಂತ' ಕಥೆ ಎರಡು ಭಾಗಗಳಲ್ಲಿ ನಿರೂಪಿತವಾಗುತ್ತದೆ. ಮೊದಲ ಭಾಗದಲ್ಲಿ ರೇಣುಕಮ್ಮನ ಜೀವನ, ಆಕೆಯ ಹಿನ್ನೆಲೆ ನಿರೂಪಣೆಯಾಗಿ ಆಕೆಯ ಸಾವಿನೊಂದಿಗೆ ಮೊದಲ ಭಾಗ ಮುಗಿಯುತ್ತದೆ. ಎರಡನೇ ಭಾಗ ಯಲ್ಲವ್ವನೊಂದಿಗೆ ಹುಲಿಗಿಗೆ ಬರುವ ಫಕೀರಪ್ಪ, ಅವನು ಜೋಗಪ್ಪನಾಗಿ ಪರಿವರ್ತನೆಯಾಗುವ ಸನ್ನಿವೇಶವನ್ನು ನಿರೂಪಿಸುತ್ತದೆ. ಯಲ್ಲವ್ವ ಯೆಂಕಟನೊಂದಿಗೆ ದೇಹ ಹಂಚಿಕೊಂಡು ಅವನೊಂದಿಗೆ ಹೊರಡುವ ಘಟನೆಯನ್ನು

ಮೂರನೇ ಭಾಗವೆಂದು ಗುರುತಿಸಬಹುದಾದರೂ ಅದು ಆರಂಭದಲ್ಲೇ ಮುಕ್ತಾಯವಾಗುತ್ತದೆ. ಜೋಗಪ್ಪ-ಜೋಗತಿಯರ ವಿಚಿತ್ರ ಬದುಕು, ಗಂಡಸಾಗಿದ್ದ ಫಕೀರಪ್ಪ ಜೋಗಪ್ಪನಾಗಿ ಬದಲಾಗುವಾಗ ಅವನ ದೇಹದಲ್ಲುಂಟಾಗುವ ಬದಲಾವಣೆಗಳು ಇವೆಲ್ಲವನ್ನು ಕಥೆಗಾರರು ಕಣ್ಮುಂದೆಯೇ ನಡೆಯುತ್ತಿದ್ದಾವೇನೋ ಎಂಬಂತೆ ನೈಜವಾಗಿ ಚಿತ್ರಿಸಿದ್ದಾರೆ.

'ವಿತಥ' ಕಥೆ ತನ್ನ ವಿಶಿಷ್ಟ ರೀತಿಯ ಸಂಭಾಷಣೆಯ ನಿರೂಪಣೆಯಿಂದ ಓದುಗರ ಗಮನ ಸೆಳೆಯುತ್ತದೆ. ಫರಿಶೀ ಕಲ್ಲಿನ ಮೇಲೆ ನಾಗರಹಾವು ಮೂಡಿದ ಸಂಗತಿ, ಹಾಸಿಗೆ ಹಿಡಿದು ಮಲಗಿದ ಮುದುಕನ ಚೀರಾಟ, ಅಚ್ಚಿಯ ಸ್ವಭಾವ, ವರ್ತನೆ, ಪಕ್ಕದ ಕಾಂಪೋಂಡಿನ ದ್ವಯಪಾವನ ಇವೆಲ್ಲವೂ ಕಥೆಗೆ ನಿಗೂಢತೆಯನ್ನು ತಂದುಕೊಡುತ್ತವೆ. ಸರ್ಪದ ಚಿತ್ರಣವಂತೂ ಕಥೆಯ ಅನೂಹ್ಯವಾದ ಜಗತ್ತನ್ನು ತೆರೆದಿಡುತ್ತದೆ. ಆ ಕಥೆಯ ಪ್ರಮುಖ ಪಾತ್ರವಾದ ಅನುಸೂಯಾ ತನ್ನ ಗರ್ಭದ ರಹಸ್ಯ ತೆರೆದಿಡುವುದು ಹೀಗೆ...

"ಎಲೇ ಅಚ್ಚಿ ಅಂಬೋನೆ...ನಾನು ಹೊಟ್ಟೀಲಿರುವುದು ಖರೇ...ಆದ್ರೆ ಕೂಸು ನಿಂದಲ್ಲೊ...ನಿಂದಲ್ಲ. ಕಮಲಂಗಿ ಆಚಾರ್‍ರ ಮೂರ್‍ನೇ ಅಳಿಯ ಇದ್ದಾನಲ್ಲ ದ್ವಯಪಾವ್ನ? ಅವಂದು"

"ಈ ಮನೀ ಅಂಬೋ ಮನೀ ಪೂರ್ತಿ ಮೈಲಿಗೆ ಆಗ್ಯದ ತಿಳಕೊ! ದ್ವಯಪಾವ್ನ ಫರಿಶೀ ಕಲ್ಲಿನ ಹಾವಾಗಿ ಮನೀ ತುಂಬಾ ಓಡ್ಯಾಡ್ಯಾನ. ಮೈತುಂಬಾ ಹರದಾಡ್ಯಾನ. ನಾ ಬಸುರಿದ್ದೀನಿ!" ಅಂದು ಒಮ್ಮೆ ಉನ್ಮತ್ತಳಂತೆ ನಕ್ಕು ಕೂತು ಬಿಟ್ಟಳು".[೮]

ಹೀಗೆ ಕಥೆಯ ಸಂಭಾಷಣೆ, ನಿರೂಪಣೆ ಓದುಗರಲ್ಲಿ ತಣ್ಣಗಿನ ಭಯವನ್ನು ಸೃಷ್ಟಿಸುತ್ತವೆ. ಕಥೆಯ ಕೊನೆಯಲ್ಲಿ ಅನುಸೂಯ ಮುಟ್ಟಾಗುವ ಮೂಲಕ ಕಥೆಯ ನಿಗೂಢತೆಯೆಲ್ಲಾ ಅನಾವರಣಗೊಳ್ಳುತ್ತದೆ. ಅವೆಲ್ಲಾ ಅನುಸೂಯಾಳ ಭ್ರಮಿತ ಮನಸ್ಸಿನ ಕಲ್ಪನೆಗಳು ಎಂಬುದು ತಿಳಿಯುತ್ತದೆ.

'ಕತ್ತಲೆ ನೋವು ಮತ್ತು ಹೆಣ' ಕಥೆ ಪ್ರಾರಂಭದಲ್ಲೇ ಕಥಾನಾಯಕ ಲಕಡೀ ಜಮ್ದಾರ ಹುಸೇನಸಾಬನ ಚಿತ್ರಣ ಕಂಡುಬರುತ್ತದೆ. ಪೊಲೀಸ್ ಸ್ಟೇಷನ್‌ನಲ್ಲಿ ಮಲಗಿದ್ದ ಹುಸೇನಸಾಬನ ಹತ್ತಿರ ಬರುವ ಅವನ ಮಗ ಜಾಕೀರ್‌ನ ತನ್ನ ಅಮ್ಮ ಸಾಯಂಕಾಲ ಅಕ್ಕಿ ತರಲು ಹೇಳಿದ್ದಾಳೆಂಬ ಮಾತುಗಳು, ಅವನ ಹತ್ತು ಪೈಸೆ ತಂದೆಯ ಹತ್ತಿರ ಕೇಳುವ ಪರಿ ಇವೆಲ್ಲವೂ ಹುಸೇನಸಾಬನ ಸಂಸಾರದ ಸ್ಥಿತಿಯ ಚಿತ್ರಣವನ್ನು ಕಟ್ಟಿಕೊಡುತ್ತದೆ. ಈ ಕಥೆ ನಾಲ್ಕು ಹಂತಗಳಲ್ಲಿ ನಿರೂಪಣೆಯಾಗುತ್ತದೆ. ಮೊದಲ ಹಂತದಲ್ಲಿ ಹುಸೇನಸಾಬನ ವ್ಯಕ್ತಿತ್ವದ ಚಿತ್ರಣ, ಅವನ ಮನೆಯಲ್ಲಿನ ಬಡತನ ಚಿತ್ರಣಗೊಂಡಿದೆ. ಎರಡನೇ ಹಂತದಲ್ಲಿ ಹದ್ದಿನ ಗುಂಡು ರೈಲ್ವೇ ಸ್ಟೇಷನ್‌ನಲ್ಲಿ ಬಿದ್ದ ಶವವನ್ನು ಕಾಯುವ ಹುಸೇನಸಾಬ ಏಕಾಂತದಲ್ಲಿ ತನ್ನ ಮೊದಲ ಹೆಂಡತಿ ಶಂಶಾದ್‌ಳೊಂದಿಗಿನ ಪ್ರೇಮದ ದಿನಗಳು, ಶಂಶಾದ್‌ಳ ಸಾವು, ಎರಡನೇ ಹೆಂಡತಿ ಫಾತೀಮಾಳೊಂದಿಗಿನ ಬದುಕು ಇವುಗಳನ್ನೆಲ್ಲಾ ನೆನಪಿಸಿಕೊಳ್ಳುವ

ಸನ್ನಿವೇಶದಲ್ಲಿ ಕಥೆ ಫ್ಲಾಷ್‌ಬ್ಯಾಕ್‌ಗೆ ತಿರುಗುತ್ತದೆ. ಅವನು ಬಾಲಕನಾಗಿದ್ದಾಗ ಸಾಯುವ ಅವನ ತಂದೆ, ಹುಚ್ಚಿಯಾಗುವ ತಾಯಿಯ ವಿಚಿತ್ರ ಸಾವು ಇವೆಲ್ಲವನ್ನು ಕಥೆಗಾರರು ಹುಸೇನಿಯ ಮನಸ್ಸಿನ ಮೂಲಕ ನಿರೂಪಿಸುತ್ತಾರೆ. ಮೂರನೇ ಹಂತದಲ್ಲಿ ಅವನ ಎರಡನೇ ಹೆಂಡತಿ ಫಾತೀಮಾಳ ಹಿರಿಯ ಮಗಳು ನೂರ್‌ಜಹಾನ್ ಸಿನೆಮಾ ಥಿಯೇಟರ್‌ನಲ್ಲಿ ಹುಡುಗನೊಬ್ಬನೊಂದಿಗೆ ಸರಸ ಸಲ್ಲಾಪದಲ್ಲಿ ತೊಡಗಿದ್ದನ್ನು ಕಾಣುವ ಹುಸೇನಿಯ ಮನಸ್ಸಿನಲ್ಲಿ ಆಗುವ ಭಾವೋದ್ವೇಗಗಳನ್ನು ಚಿತ್ರಿಸಲಾಗಿದೆ. ನಾಲ್ಕನೇ ಹಂತದಲ್ಲಿ ತನ್ನ ವೃತ್ತಿಯಿಂದ ನಿವೃತ್ತಿಯಾಗುವ ಹುಸೇನಿ ತನ್ನ ಹಳೆಯ ಯೂನಿಫಾರಂ ಧರಿಸಿ ರಾತ್ರಿ ಸೂಳೆಯರ ಓಣಿಗೆ ವಸೂಲಿಗೆಂದು ಹೊರಡುತ್ತಾನೆ. ಅಲ್ಲಿ ತನ್ನ ಮಗಳೇ ಸೂಳೆಗಾರಿಕೆ ಮಾಡುತ್ತಿರಬಹುದೆ? ಎಂಬ ಭಾವನೆ ಅವನನ್ನು ಹೆದರಿಸುತ್ತದೆ. ಅಲ್ಲಿ ಸತ್ತ ಹೆಂಗಸಿನ ಕೊರಳಲ್ಲಿಯ ಮಾಂಗಲ್ಯವನ್ನು ಕದಿಯುವ ಹುಸೇನಿ ಅದನ್ನು ದಕ್ಕಿಸಿಕೊಳ್ಳಲಾರದೇ ಕಥೆಯ ಅಂತ್ಯದಲ್ಲಿ ಸಾಯುತ್ತಾನೆ. ತನ್ನ ಮಗಳು ಎಲ್ಲಿ ವೇಶ್ಯೆಯಾಗಿ ಮೈಮಾರಿಕೊಳ್ಳುತ್ತಾಳೋ ಎಂಬ ಅವನ ತಳಮಳಗಳು,

'ಮೈ ಡಾಟರ್ ಡೂಯಿಂಗ್ ಪ್ರಾಸ್! ಡೂಯಿಂಗ್...'

ಎಂಬ ಗೊಣಗಾಟ ಇವೆಲ್ಲ ಅವನ ಅಸಹಾಯಕತೆಯನ್ನು ಕಥೆಯಲ್ಲಿ ಬಿಂಬಿಸುತ್ತವೆ. ಈ ಕಥೆಯಲ್ಲಿ ಮುಖ್ಯಪಾತ್ರವೇ ಹುಸೇನಿಯಾಗಿದ್ದರೂ ಅವನ ಸಂಭಾಷಣೆ ಕಥೆಯಲ್ಲಿ ತುಂಬಾ ವಿರಳವಾಗಿದೆ. ಮಾತಿಗಿಂತ ಅವನ ಮನಸಿನೊಳಗಿನ ಮೌನದ ಮಾತುಗಳೇ ಈ ಕಥೆಯಲ್ಲಿ ಮೈದಳೆದಿವೆ.

'ವೇಷಗಳು' ಕಥೆ ರೈಲ್ವೇ ಸ್ಟೇಷನ್‌ನಿಂದ ಪ್ರಾರಂಭವಾಗಿ ರೈಲ್ವೇ ಸ್ಟೇಷನ್‌ನಲ್ಲಿ ಮುಕ್ತಾಯವಾಗುತ್ತದೆ. ಇಲ್ಲಿ ಕಥೆಗಾರರು ಕಥಾನಾಯಕಿ ಶಿವಿಯ ಬದುಕನ್ನು ಮೂರು ಹಂತಗಳಲ್ಲಿ ಚಿತ್ರಿಸಿದ್ದಾರೆ. ಸಿಮ್ಮಣ್ಣನೊಂದಿಗಿನ ಕುಣಿತದ ಬದುಕು, ಬಸಪ್ಪನೊಂದಿಗಿನ ಬದುಕು, ತನಗೆ ತಾಯ್ತನದ ಸುಖ ತಂದುಕೊಡುವ ಮಗು ಅಂಜನಪ್ಪನೊಂದಿಗಿನ ಬದುಕು ಇವುಗಳೊಂದಿಗೇ ಕಥೆ ನಿರೂಪಣೆಯಾಗುತ್ತಾ ಸಾಗುತ್ತದೆ. ಕಥೆಯ ಆರಂಭದಲ್ಲೇ ಗರ್ಭಿಣಿಯಾಗಿ ಕಾಣಿಸಿಕೊಳ್ಳುವ ಶಿವಿ, ನಂತರ ಅವಳ ಹಿನ್ನೆಲೆ, ಅವಳ ಗರ್ಭದ ಕಾರಣ ಕರ್ತ ಇಂಥ ವಿವರಗಳು ಒಂದೊಂದಾಗಿ ಅನಾವರಣಗೊಳ್ಳುತ್ತವೆ. ಶಿವಿ ಬಸಪ್ಪನ ಮನೆಗೆ ಬಂದಾಗ ಬಸಪ್ಪ ಈ ಹಿಂದೆ ಜೋಗಪ್ಪನಾಗಿದ್ದು, ಅದಕ್ಕೆ ಕಾರಣವಾದ ಸನ್ನಿವೇಶಗಳು ಇವೆಲ್ಲಾ ಕಥೆಯಲ್ಲಿ ನಿರೂಪಿತವಾಗುತ್ತವೆ. ತುಂಬು ಗರ್ಭಿಣಿಯಾದ ಶಿವಿಯನ್ನು ಒಂಟಿಯಾಗಿ ಬಿಟ್ಟು ಹೊರಟು ಹೋಗುವ ಅವಳ ತಂಡ, ನಂತರ ಹೆರಿಗೆ ನೋವು ಉಂಟಾಗಿ ಆಸ್ಪತ್ರೆಗೆ ತೆವಳು ತೆವಳುತ್ತಲೇ ಬರುವ ಶಿವಿಯ ಹಸಿವನ್ನು ಕಥೆಗಾರರು ಇಲ್ಲಿ ನಿರೂಪಿಸಿರುವುದು ಹೀಗೆ...

'ಅಂದು ರಾತ್ರಿ ಬಿಟ್ಟು ಹೋದ ಸಿಮ್ಮಣ್ಣನ ಹಾಗೆ, ಹಗಲು ಕುಣಿತದಲ್ಲಿ ಮರೆತು ಕೈಬಿಟ್ಟ ಚೆನ್ನೀರನ ಹಾಗೆ, ಡಾಕ್ಟರು ಶಿವಿಯನ್ನು ಟೇಬಲ್ಲಿನ ಮೇಲೆ ಬಿಟ್ಟು ಹೋಗಿದ್ದರು.

ತುಸು ಹೊತ್ತಿನ ನಂತರ ಬಂದ ಆಯಾ ಒಬ್ಬಳು ಶಿವಿಯ ಕೈಗೊಂದು ತುಂಡು ಕಾಗದವಿತ್ತು ಆಸ್ಪತ್ರೆಯ ಬಾಗಿಲಿಗೆ ತಲುಪಿಸಿದ್ದಳು. ಕೈಯಲ್ಲಿನ ತುಂಡು ಕಾಗದ ನೋಡಿಕೊಂಡಳು ಶಿವಿ. ಸಾಲು ಸಾಲು ಔಷಧಿಗಳ ಪಟ್ಟಿ, ಎಲ್ಲಿಂದ ತಂದಾಳು? ಆ ಕ್ಷಣದಲ್ಲಿ ತಿನ್ನಲು, ಕೈಲಿದ್ದ ಕಾಗದದ ಚೂರಿನ ಹೊರತು ಮತ್ತೇನೂ ಇಲ್ಲ'.[೯]

ಎಂಬ ನಿರೂಪಣೆಯಲ್ಲೇ ಅವಳ ಅಸಹಾಯಕತೆ, ಹಸಿವು ಇವುಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಕೋತಿಯನ್ನು ಹೋಲುವ, ಬುದ್ಧಿಮಾಂದ್ಯ ವಿಕಾರ ರೂಪದ ಕೂಸು ಅಂಜಪ್ಪನ ಪಾತ್ರ, ಅದರ ವರ್ತನೆಯ ಚಿತ್ರಣವನ್ನು ಕೂಡಾ ಇಲ್ಲಿ ಕಥೆಗಾರರು ಓದುಗರ ಕಣ್ಮುಂದೆಯೇ ತಂದಿರುವಂತೆ ನಿರೂಪಿಸಿದ್ದಾರೆ.

'ಮಸೀದಿ ಬಿದ್ದ ಮೂರನೇ ದಿನ' ಕಥೆ, ಮಸೀದಿ ಬಿದ್ದ ದಿನದ ಮಧ್ಯಾಹ್ನದಿಂದ ಮೂರನೇ ದಿನದ ಬೆಳಗಿನ ಅವಧಿಯೊಳಗೆ ನಡೆಯುತ್ತದೆ. ನೈಟ್‌ಡ್ಯೂಟಿ ಗಾರ್ಡ್ ಆಗಿ ಫ್ಯಾಕ್ಟರಿ ಕಾಯುವ ಗುರುಸಾಂತ ರಾತ್ರಿಯ ನೀರವತೆಯ ಏಕಾಂತದಲ್ಲಿ ತನ್ನ ಮನೆಯಲ್ಲಿ ಒಬ್ಬಳೇ ಇರುವ ಹೆಂಡತಿ ಹಾಗೂ ಅತ್ತಾರ್‌ಸಾಬು ಇವರ ನಡುವೆ ಅನೈತಿಕ ಸಂಬಂಧ ಪ್ರಾರಂಭವಾಗಿರಬಹುದೇ? ಎಂಬ ಅನುಮಾನ ಅವನನ್ನು ಕಾಡುತ್ತದೆ. ಅವನ ಮನಸ್ಸಿನೊಳಗೆ ಅಂದುಕೊಳ್ಳುವ ಮಾತುಗಳೇ ಈ ಕಥೆಯಲ್ಲಿ ತುಂಬಿಕೊಂಡಿವೆ. ಗುರುಸಾಂತನ ಡ್ಯೂಟಿಯ ಯುನಿಫಾರ್ಮ್‌ನ ಸ್ಟೀಲುಪೀಪಿ, ಊದಿದಾಗ ಉಂಟಾಗುವ ಅದರ ಸದ್ದು, ಖಾಕಿ ಅಂಗಿಯ ಹೆಗಲಿಗಿರುವ 'ಸೆಕ್ಯುರಿಟಿ ಗಾರ್ಡ್' ಎಂಬ ಸ್ಟೀಲು ಅಕ್ಷರ ಇಂತಹ ಸೂಕ್ಷ್ಮ ವಿಷಯಗಳನ್ನು ಕೂಡಾ ರವಿಯವರು ಈ ಕಥೆಯಲ್ಲಿ ಬಳಸಿಕೊಳ್ಳುವಲ್ಲಿ ತಮ್ಮ ಸೃಜನಶೀಲತೆಯನ್ನು ಮೆರೆದಿದ್ದಾರೆ. ಈ ಕೆಳಗಿನ ನಿರೂಪಣೆಯಲ್ಲಿ ಅದನ್ನು ಕಾಣಬಹುದು.

"ಗುಡಿಸಲಿನಿಂದ ಹೊರಬಂದವನೇ ಭುಜಕ್ಕೆ ಸುತ್ತಿಕೊಂಡು ಮಲಗಿದ್ದ ಗೋದಿ ನಾಗರಹಾವಿನ ಮರಿಯಂತಹ ದಾರದ ತುದಿಗೆ ನೇತಾಡುತ್ತಿದ್ದ ಸ್ಟೀಲು ಪೀಪಿಯನ್ನು ಬಾಯಲ್ಲಿಟ್ಟುಕೊಂಡು 'ಸಿಳ್ಳಲ್ ಸಿಲ್' ಎಂಬಂತೆ ಒಮ್ಮೆ ಸದ್ದು ಮಾಡಿ, ಪೀಪಿ ಸರಿಯಾಗಿದೆಯೆಂಬುದು ಮನವರಿಕೆಯಾದ ನಂತರ ಅದನ್ನು ಖಾಕಿ ಅಂಗಿಯ ಜೇಬಿಗಿಳಿಸುತ್ತಾ ರಪರಪನೆ ನಡೆಯತೊಡಗಿದ. ಆ ಟಾರಿಲ್ಲದ ಬೀದಿಯ ಅಂಚಿನಲ್ಲಿ ಅವನು ಎಡಕ್ಕೆ ಹೊರಳುವಾಗ ರಸ್ತೆ ಪಕ್ಕದ ದೀಪದ ಬೆಳಕಿನಲ್ಲಿ ಅವನ ಹೆಗಲಿಗಿದ್ದ 'ಸೆಕ್ಯುರಿಟಿ ಗಾರ್ಡ್' ಎಂಬ ಸ್ಟೀಲು ಬಿಳ್ಳೆ ನೀರಸವಾಗಿ ಹೊಳೆದುದನ್ನು ಅವಳು ಗುಡಿಸಲ ಬಾಗಿಲಲ್ಲಿ ನಿಂತು ಗಮನಿಸಿದಳು".[೧೦]

ಮಸೀದಿ ಬಿದ್ದ ಮೂರನೇ ದಿನ ಬೆಳಿಗ್ಗೆ ಡ್ಯೂಟಿಗೆಂದು ಹೊರಟ ಅತ್ತಾರ್‌ಸಾಬು ಗಲಭೆಯಲ್ಲಿ ಕೊಲೆಯಾಗಲ್ಪಡುವುದರೊಂದಿಗೆ ಕಥೆ ಅಂತ್ಯವಾಗುತ್ತದೆ.

'ಗಿಡ್ಡಾಂಜನೇಯ ಸ್ವಾಮಿ' ಕಥೆ ಸಂಪೂರ್ಣವಾಗಿ ಬಳ್ಳಾರಿ ನಗರದಲ್ಲೇ ನಡೆಯುವ ಕಥೆಯಾಗಿರುವುದರಿಂದ ಇಡೀ ಕಥೆಯಲ್ಲಿ ಬಳ್ಳಾರಿ ನಗರದ ಬೀದಿ, ಓಣಿ, ಸುತ್ತಲಿನ ಹಳ್ಳಿ,

ಜನರ ಭಾಷೆ, ಬದುಕು ಇವುಗಳನ್ನೆಲ್ಲಾ ಕಲಾತ್ಮಕತೆಯಿಂದ ಈ ಕಥೆಯಲ್ಲಿ ಹೆಣೆಯಲಾಗಿದೆ. ಪ್ರಭಾತ್ ಟಾಕೀಸ್, ಥಿಯಾಸಫಿಕಲ್ ಲಾಡ್ಜ್, ಮಿಲ್ಲರ್‌ಪೇಟೆ, ಗೌಳೇರ ಹಟ್ಟಿ, ನಗರೇಶ್ವರ ಗುಡಿ ಹೀಗೆ ಇಡೀ ಬಳ್ಳಾರಿಯ ಚಿತ್ರಣ ಈ ಕಥೆಯಲ್ಲಿ ಮಿಳಿತವಾಗಿದೆ. ಗಂಡು ಹೆಣ್ಣಿನ ಸಂಬಂಧವನ್ನು ವಿವರಿಸುವ ವಸ್ತುವನ್ನೊಳಗೊಂಡ ಈ ಕಥೆ ಆರಂಭಗೊಳ್ಳುವುದೇ 'ಕಥಾನಾಯಕಿ ಪಾರಿಜಾತ ಬಾಲಾಂಜಿಯ ಬಲಿಷ್ಟ ದೇಹವನ್ನು ಆಸೆಗಣ್ಣಿನಿಂದ ನೋಡುವ ಸನ್ನಿವೇಶದಿಂದ'. ಗಿಡ್ಡಾಂಜನೇಯ ಸ್ವಾಮಿ ಗುಡಿಯ ಪೂಜಾರಿ ಬಾಲಾಂಜಿಯ ಚಿತ್ರಣ, ಅವನ ಹಿನ್ನೆಲೆ, ಬದುಕು ಇವುಗಳೆಲ್ಲಾ ಕಥೆಗಾರರು ಕಥೆಯ ಆರಂಭದ ಹಂತದಲ್ಲಿಯೇ ಚಿತ್ರಿಸುತ್ತಾರೆ. ಜೀವನದಲ್ಲಿ ಒಮ್ಮೆಯೂ ಹೆಣ್ಣನ್ನು ಕಣ್ಣೆತ್ತಿ ನೋಡದ ಕಟ್ಟಾ ಬ್ರಹ್ಮಚಾರಿ ಬಾಲಾಂಜಿಯ ಬದುಕಿನಲ್ಲಿ ಪ್ರವೇಶಿಸುವ ಸಿರಿಜಾತ ಕಥೆಗೆ ಪ್ರಮುಖ ತಿರುವು ನೀಡುತ್ತಾಳೆ. ರವಿಯವರ ಬಹುತೇಕ ಕಥೆಗಳಲ್ಲಿರುವಂತೆ ಈ ಕಥೆಯಲ್ಲಿಯೂ ಗಂಡು-ಹೆಣ್ಣಿನ ದೈಹಿಕ ಮಿಲನದ ಚಿತ್ರಣವನ್ನು ಹೆಣೆಯಲಾಗಿದೆ. ಇಂತಹ ಸನ್ನಿವೇಶವನ್ನು ರವಿಯವರು ತುಂಬಾ ಶುಷ್ಕವಾಗಿಯೂ ಚಿತ್ರಿಸದೇ, ಅತೀ ರಂಜನೀಯವಾಗಿಯೂ ಚಿತ್ರಿಸದೇ, ಅಶ್ಲೀಲತೆಯ ಸೋಂಕಿಲ್ಲದೇ ಕಲಾತ್ಮಕತೆಯಿಂದ ಚಿತ್ರಿಸಿರುವುದು ಹೀಗೆ...

'ಮುಂದಕ್ಕೆ ಬಾಗಿದಳು ಸಿರಿಜಾತ. ಅವಳ ಕೊರಳಲ್ಲಿನ ತಾಳಿ ಬಾಲಾಂಜಿನಿಯ ಬಂಡೆ ಬೆನ್ನಿನ ಮೇಲೆ ನರ್ತಕಿಯ ಪಾದದಿಂದ ಕಳಚಿ ಸರಿದ ಬಂಗಾರದ ಗೆಜ್ಜೆಯಂತೆ ಸರಿಯಿತು. ಬಾಲಾಂಜಿ ಮಗ್ಗಲು ಬದಲಾಯಿಸಿದ. ಸಿರಿಜಾತ ಮಗ್ಗಲು ಸೇರಿಕೊಂಡಳು. ಗಂಧ ಘಮ್ಮೆಂದಿತು. ದೇವರನ್ನು ಮುಟ್ಟಿದ್ದು ನೆನಪಾಯಿತು. ಸಿರಿಜಾತ ಅವನ ತಲೆಗೂದಲೊಳಕ್ಕೆ ತನ್ನ ತೆಳುವಾದ ಸುನೀತ ಸುನೀತ ಬೆರಳು ಸೇರಿಸಿದಳು. ಕಣಗಿಲೆ ಅಲುಗಿಂತಾಯಿತು. ಆ ಮೇಲೆ ಸಿರಿಜಾತ ಅಲ್ಲೇ ಅರ್ಧ ಎದ್ದು ಕೂಡುವಂತೆ ಕುಳಿತು ಬಾಲಾಂಜಿಯ ನಿಬ್ಬೆರಗು ಕಣ್ಣುಗಳ ಎದುರಿನಲ್ಲೇ ರವಿಕೆಯ ಹುಕ್ಕುಗಳನ್ನು ಕ್ಲಕ್ಕು ಕ್ಲಕ್ಕನೆ ತಪ್ಪಿಸಿ ಮೈ ತುಂಬ ನಗ್ನಳಾದಳು. ಬಾಲಾಂಜಿ ವಿಭ್ರಾಂತನಾಗಿದ್ದ. ನಗರೇಶ್ವರ ಸ್ವಾಮಿ ದೇವಸ್ಥಾನದ ಬಿಗ್ನ ಬೆಳಗು, ಯಾರೋ ಹೇಳಿಕೊಟ್ಟು ಯಾರೋ ಹೇಳಿದಂತೆ ಬ್ರಹ್ಮ ಮುರಾರಿ ಸುರಾರ್ಜಿತ ಲಿಂಗವು ಜಾಗೃತಗೊಂಡು, ಯಾರೋ ಸ್ವಿಚ್ಚು ಹಾಕಿದ ಕೂಡಲೇ ಗಂಟೆ, ನಗಾರಿಗಳೆಲ್ಲ ಮೊಳಗಿ ಸಿರಿಜಾತಳ ಕೊರಳ ಗಂಧವೆಲ್ಲ ಮೈಗೆ...!'[೧೧]

ಈ ಸನ್ನಿವೇಶದ ಚಿತ್ರಣದಲ್ಲಿ ರವಿಯವರು ಬಳಸಿರುವ ಉಪಮೆ, ರೂಪಕಗಳು ಕಥೆಯ ನಿರೂಪಣೆಯ ಸೌಂದರ್ಯವನ್ನು ವೃದ್ಧಿಸಿವೆ. ಈ ಕಥೆಯಲ್ಲಿ ಪಾತ್ರಗಳು ಪರಸ್ಪರ ಮಾತಾಡುತ್ತಾ ಕಥೆಯನ್ನು ನಿರೂಪಿಸುತ್ತವಾದರೂ ಅದಕ್ಕಿಂತ ಹೆಚ್ಚಾಗಿ ಕಥೆಯನ್ನು ನಿರೂಪಿಸುವುದು ಕಥೆಗಾರರೇ. ಈ ಕಥೆಯಲ್ಲಿ ಕಥೆಗಾರರು ಒಂದು ಪಾತ್ರವಾಗಿ ಕಾಣಿಸಿಕೊಂಡಿಲ್ಲ. ಆದರೆ ಕಥೆಯಿಂದ ಹೊರಗೆ ನಿಂತು ಇಡೀ ಕಥೆಯನ್ನು ನಿರೂಪಿಸುತ್ತಾ ಸಾಗುತ್ತಾರೆ. ಪಾತ್ರಗಳಾಡುವ ಸಂಭಾಷಣೆಗೆ ಪೂರಕವಾದ ವಿವರಣೆ, ಪಾತ್ರಗಳ ಸ್ವಭಾವ, ಕ್ರಿಯೆ ಇವೆಲ್ಲವೂ ಕಥೆಗಾರರ ನಿರೂಪಣೆಯಲ್ಲೇ ಕಥೆ ಅರಳುತ್ತಾ ಹೋಗುತ್ತದೆ. ಬಾಲಾಂಜಿಯ

ಸಾವಿನಿಂದ ಈ ಕಥೆ ಅಂತ್ಯವಾಗುತ್ತದೆ. ಬಾಲಾಂಜಿ ಪ್ರತಿದಿನ ಆಂಜನೇಯ ಸ್ವಾಮಿಗೆ ಮಾಡುವ ಅಲಂಕಾರ, ಪೂಜೆ ಹಾಗೂ ಆಂಜನೇಯ ಸ್ವಾಮಿ ಮೂರ್ತಿಯ ವರ್ಣನೆ ಇವುಗಳೆಲ್ಲದರ ನಿರೂಪಣೆಯ ನಾಟಕೀಯತೆಯ ಚೆಲುವು ಕಥೆಯಲ್ಲಿ ಮೇಳೈಸಿದೆ.

'ಬರುವನೇನೇ ಸಖಿ ಚೆಲುವ...' ಕಥೆಯಲ್ಲಿ ಪಾತ್ರಗಳ ಸಂಭಾಷಣೆಗಳಿಗಿಂತ ನಿರೂಪಕರ ನಿರೂಪಣೆಯಲ್ಲಿಯೇ ಕಥೆ ಬಿಚ್ಚಿಕೊಳ್ಳುತ್ತದೆ. ತಂದೆ–ಮಗಳ ನಡುವಿನ ಪ್ರೀತಿ–ವಾತ್ಸಲ್ಯವನ್ನು ಈ ಕಥೆಯ ಮೂಲಕ ಆಪ್ತವಾಗಿ ಹೆಣೆದಿದ್ದಾರೆ ರವಿ. ಈ ಕಥೆಯಲ್ಲಿ ಕಥಾನಾಯಕಿಯೇ ಕಥೆಯ ನಿರೂಪಕಿ. ತನ್ನ ಬದುಕಿನಲ್ಲಿ ನಡೆದ ಕಥೆಯನ್ನೇ ಮತ್ತೊಮ್ಮೆ ನೆನಪಿಸಿಕೊಳ್ಳುವ ಶೈಲಿಯಲ್ಲಿ ಈ ಕಥೆ ಮೂಡಿಬಂದಿದೆ. ಕಥೆಯ ಆರಂಭದಿಂದ ಕೊನೆಯವರೆಗೆ ನಾಯಕಿ ಕಥೆಯನ್ನು ನಿರೂಪಿಸುತ್ತಾಳಾದರೂ ಕೆಲವು ಸನ್ನಿವೇಶಗಳಲ್ಲಿ ಕಥೆಗಾರರೇ ನಿರೂಪಕರಾಗಿ ನಿರೂಪಿಸುತ್ತಾರೆ. ಆದರೆ ಈ ಬಗೆಯ ನಿರೂಪಣೆಯ ವ್ಯಾಪ್ತಿ ಕಥೆಯಲ್ಲಿ ತುಂಬಾ ಚಿಕ್ಕದು. ಇಲ್ಲಿ ನಾಯಕಿಯ ನಿರೂಪಣೆಯಲ್ಲಿಯೇ ಇಡೀ ಕಥೆ ನಿರೂಪಿತವಾಗುತ್ತದೆ. ಯೂನಿವರ್ಸಿಟಿಯಲ್ಲಿ ಓದುತ್ತಿರುವ ಕಥಾನಾಯಕಿ ತನ್ನ ಹಳ್ಳಿ, ಜಮೀನು, ಮನೆ ಇವುಗಳನ್ನೆಲ್ಲಾ ನೆನಪಿಸಿಕೊಳ್ಳುತ್ತಾಳೆ. ತನ್ನ ತಂದೆಯ ಹಿನ್ನೆಲೆಯನ್ನು ನೆನಪುಮಾಡಿಕೊಳ್ಳುವ ಸನ್ನಿವೇಶದಲ್ಲಿ ತನ್ನ ತಂದೆಯ ವ್ಯಕ್ತಿತ್ವದ ಚಿತ್ರಣವನ್ನು ಕಟ್ಟಿಕೊಡುತ್ತಾಳೆ. ಅವಳೊಂದಿಗಿನ ಮುಕುಂದನ ಪ್ರೀತಿ, ಇಬ್ಬರ ಅಗಲಿಕೆ, ಗರ್ಭಿಣಿಯಾಗುವ ನಿರೂಪಕಿ, ಜವಾಬ್ದಾರಿಯುತ ತಂದೆಯಂತೆ ವರ್ತಿಸುವ ಅವಳ ತಂದೆ, ಮರಳಿ ಬರುವ ಮುಕುಂದ ಇವೆಲ್ಲಾ ನೆನಪುಗಳೇ ಕಥೆಯಾಗಿ ನಿರೂಪಣೆಯಾಗುತ್ತವೆ. ಕಥಾನಾಯಕಿ ಮತ್ತು ಮುಕುಂದರ ಮದುವೆಯ ಸನ್ನಿವೇಶದಲ್ಲಿ ಕಥೆ ಅಂತ್ಯವಾಗುತ್ತದೆ. ಆದರೆ ಕಥೆಯ ಅಂತ್ಯದಲ್ಲಿ ಪತ್ರ ಬರೆದಿಟ್ಟು, ನಾಯಕಿಯ ಜನ್ಮರಹಸ್ಯವನ್ನೇ ನಿಗೂಢವನ್ನಾಗಿ ಸೃಷ್ಟಿಸಿ, ಮನೆ ಬಿಟ್ಟು ಹೊರಟು ಹೋಗುವ ಕಥಾನಾಯಕಿಯ ತಂದೆಯ ವರ್ತನೆಗೆ ಕಾರಣಗಳೇ ಸಿಗುವುದಿಲ್ಲ. ಕಥಾನಾಯಕಿಯ ನಿಜವಾದ ಜನ್ಮದಾತ ಯಾರು? ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ. ಇದು ಕಥೆಯ ನಿಗೂಢ ಅಂತ್ಯ.

ಕಥನ ಶೈಲಿಯ ದೃಷ್ಟಿಯಿಂದ 'ಕುಹು ಕುಹರ', 'ಪರಿಚಯ' ಹಾಗೂ 'ಆಕ್ರಮಣ' ಕಥೆ ಉಳಿದೆಲ್ಲಾ ಕಥೆಗಳಿಗಿಂತ ವಿಭಿನ್ನವಾಗಿವೆ. ಈ ಕಥೆಗಳನ್ನು ನಿರೂಪಿಸುವ ಕಥಾನಾಯಕರು ನಿರೀಂದ್ರಿಯ ಸ್ಥಿತಿಯನ್ನು ಹೊಂದಿದವರು. ಈ ಪಾತ್ರಗಳು ತಮ್ಮ ಮನಸ್ಥಿತಿಯನ್ನು, ಮನಸ್ಸಿನೊಳಗಿನ ಮಾತುಗಳನ್ನು, ವಿಕ್ಷಿಪ್ತ ಬದುಕನ್ನು, ರಿಕ್ತತೆಯ ಸ್ಥಿತಿಯನ್ನು ವಿವರಿಸುವ ವಿವರಣೆಗಳೇ ಇಲ್ಲಿ ಕಥೆಯಾಗಿ ಸೃಷ್ಟಿಯಾಗಿವೆ.

'ಕುಹು ಕುಹರ' ಕಥೆಯ ಕಥಾನಾಯಕ ಕಲಾವಿದನ ಮನೋಲೋಕದಲ್ಲಿಯ ವಿಕ್ಷಿಪ್ತ ಸಂಗತಿಗಳೇ ಕಥೆಯಲ್ಲಿ ನಿರೂಪಿತವಾಗುತ್ತದೆ. ಕಲಾವಿದನಾಗಿದ್ದವನು ಹೆಂಗಸಿನೊಂದಿಗೆ ದೈಹಿಕ ಸಂಬಂಧವನ್ನು ಹೊಂದಿ ತನ್ನ ಕಲೆಯನ್ನು ಕಳೆದುಕೊಂಡು, ಎಂಟು ಭೀಕರ ಕೈಗಳಲ್ಲಿ ಪುಟ್ಟ ಮಗುವನ್ನು ಹಿಡಿದು ಒಂದೊಂದೇ ನೆತ್ತರ ಹನಿ ನೆಕ್ಕುತ್ತಿದ್ದ ಆಕ್ಟೋಪಸ್‌ನ

ರಕ್ತವರ್ಣ ಚಿತ್ರವನ್ನು ಬಿಡಿಸುವ ವಿವರಣೆ ಓದುಗರಲ್ಲಿ ಜಿಗುಪ್ಸೆ ಮೂಡಿಸುತ್ತದೆ. ಕುಂಚ ಬಿಸಾಡಿದ ನಿರೂಪಕ ಹೆಣದ ಮೇಲಿನ ಒಡವೆಗಳು, ಹೆಣವನ್ನು ಕದ್ದು ಮಾರುವ ಸನ್ನಿವೇಶಗಳೆಲ್ಲವನ್ನು ತನ್ನೊಳಗೆ ತಾನೇ ವಿವರಿಸಿಕೊಳ್ಳುವಂತೆ ನಿರೂಪಿಸುತ್ತಾನೆ. "ನನ್ನ ನಂಬಿಕೆಯ ಪ್ರಕಾರ ಒಬ್ಬ ವ್ಯಕ್ತಿ ಬಲು ನೈಜವಾಗಿ ಕಾಣುವುದು ಅತ್ತಾಗ... ಇಲ್ಲವೇ ಸತ್ತಾಗ!" ಎಂಬ ನಿರೂಪಕನ ನಿರೂಪಣೆಯ ಮಾತುಗಳು ಕಥೆಗೆ ಮೆರುಗನ್ನು ನೀಡಿವೆ. ಇಂತಹ ಮಾತುಗಳು ಕಥೆಯುದ್ದಕ್ಕೂ ನಿರೂಪಣೆಯಾಗಿದ್ದು ಓದುಗರನ್ನು ಚಿಂತನೆಗೆ ಹಚ್ಚುತ್ತವೆ. ಬದುಕಿನ ಕಟು ವಾಸ್ತವತೆಯನ್ನು, ನಗ್ನ ಸತ್ಯಗಳನ್ನು ಈ ಕಲಾವಿದನ ಮನಸ್ಸಿನ ಮಾತುಗಳ ಮೂಲಕ ರವಿಯವರು ನಿರೂಪಿಸಿದ್ದಾರೆ.

'ಪರಿಚಯ' ಕಥೆಯ ನಾಯಕ 'ಕಥೆಗಾರ ಶ್ರೀವತ್ಸ' ಕೂಡಾ ನಿರೀಂದ್ರಿಯ ಸ್ಥಿತಿಯನ್ನು ಹೊಂದಿದವನು. ಇಡೀ ಕಥೆಯಲ್ಲಿ ಕುರೂಪತನ, ವಿಕೃತತೆಯನ್ನು ಕಥೆಯಲ್ಲಿ ಚಿತ್ರಿಸಲಾಗಿದೆ. ಕಥಾನಾಯಕ ಶ್ರೀವತ್ಸನೇ ಇಲ್ಲಿ ಕಥೆಯ ನಿರೂಪಕನಾಗಿರುವುದರಿಂದ ಅವನ ಮನಸ್ಸಿನಲ್ಲಿಯ ಮಾತುಗಳಿಂದ ಈ ಕಥೆ ಹೆಣೆಯಲ್ಪಟ್ಟಿದೆ. ಇಡೀ ಕಥೆಯಲ್ಲಿ ಶ್ರೀವತ್ಸ ಮಾತಾಡುವುದು ಒಂದೇ ವಾಕ್ಯ. ಉಳಿದಂತೆ ಅವನ ಮನಸ್ಸಿನ ಮೌನವೇ ಮಾತಾಡುತ್ತದೆ. ಕಥೆಯ ಆರಂಭದಲ್ಲೇ ತನ್ನ ಹಾಗೂ ತನ್ನ ಇಬ್ಬರು ತಂಗಿಯರ ವಿಕಾರ ರೂಪವನ್ನು ಪರಿಚಯಿಸುವ ಕಥೆಗಾರ ಶ್ರೀವತ್ಸ ತನ್ನ ಸ್ಥಿತಿಯನ್ನು ನಿರೂಪಿಸುವುದು ಹೀಗೆ... "ಜಗತ್ತಿನ ಯಾವ ಸಂಪರ್ಕಾನೂ ನಂಗಿಲ್ಲ. ನಾನು ಪೇಪರೋದಲ್ಲ, ರೇಡಿಯೋದಲ್ಲಿ ವಾರ್ತೆ ಕೇಳಲ್ಲ. ಕಿಟಕೀಲಿ ನಿಂತು ಆಕಾಶ ನೋಡಲ್ಲ. ವರಾಂಡದಾಚೆ ಹೋಗಿ ಸೂರ್ಯನ್ನ ಕಾಯಲ್ಲ. ನನ್ ಕತ್ಲ ಕೋಣೆಗೆ ಯಾರೂ ಬರಲ್ಲ. ಪ್ರಪಂಚವೇ ಬ್ಯಾರೆ. ನಾನೇ ಬ್ಯಾರೆ. ತಂಗಿ ಅಡುಗೆ ಮಾಡ್ತಾಳೆ. ಬಡಿಸಿದ ತಟ್ಟೆ ತಂದು ರೂಮು ಬಾಗ್ಲಲ್ಲಿಡ್ತಾಳೆ. ಕಕ್ಕಸ್ಸು ಮನೇಲೇ ಇದೆ. ನಾನು ಕ್ಯಾಲೆಂಡ್ರೂ ನೋಡಲ್ಲ. ರೂಮಲ್ಲಿರೋ ಗಡಿಯಾರ ನಿಂತು ಹೋಗಿದೆ. ತಂಗೀರು ಸಂಬ್ಳ ತರೋ ದಿನ ನಾನು ರೂಮು ಸೇರ್ಕೋತೀನಿ. ಆ ಸಡಗರ ನೋಡೋಕೆ ನನ್ಕೈಲಾಗಲ್ಲ. ಆದ್ರೆ ಅದೆಲ್ಲ ಒಂದೇ ದಿನದ ಖುಷಿ. ದಿನಾ ತಂಗಿ ವೀಣೆ ನುಡುಸ್ತಾಳೆ. ಒಬ್ಳೆ ಅಡುಗೆ ಮನೇಲಿ ಕೂತು ಬಿಕ್ಕಳಿಸುತ್ತಾಳೆ. ಅಪ್ಪ ಕಳ್ಸಿದ ಜಾತಕ ವಾಪಾಸ್ ಬಂದ ದಿನ ಮೂರು ಜನ ಕೂತು ತುಂಬಾ ಹೊತ್ತು ಮಾತಾಡ್ತಾರೆ. ಕ್ಲಿಪ್ಪು ಹಾಕಿಸ್ಕೊಂಡ್ರೆ ಮದುವೆಯಾಗುತ್ತೆ ಅಂತಾಳೆ ಲ್ಯಾಬಿನೋಳು. ಅಪ್ಪ ದೇವರ ಮನೆ ಹೊಕ್ಕು ಬಿಡ್ತಾರೆ. ತಂಗಿ ವೀಣೆ ಕಲಿಯೋಕೆ ಹೋಗ್ತಾಳೆ. ಲ್ಯಾಬಿನೋಳು ರಾತ್ರಿ ಎಷ್ಟೊತ್ತಿನತಂಕಾ ಚಿತ್ರಗೀತೆ ಹಾಡುತ್ತಾಳೆ. ನಾನು ಬೋರಲು ಮಲಗಿ ಕೊಳಕು ದಿಂಬಿಗೆ ಮೂಗುಜ್ಜುತ್ತೇನೆ. ಸತ್ತೋಗಿರೋ ಅಮ್ಮ ನೆನಪಾಗ್ತಾ ಆಗ್ತಾನೇ ನಿದ್ದೆ ಬಂದು ಬಿಡುತ್ತೆ"[೨] ಎಂಬ ನಿರೂಪಣೆಯಲ್ಲಿ ಕಥಾನಾಯಕನ ಇಡೀ ಮನೆಯ ಚಿತ್ರಣ ಹಾಗೂ ಅವನ ವಿಕ್ಷಿಪ್ತ ಬದುಕನ್ನು ರವಿಯವರು ಚಿತ್ರಿಸುತ್ತಾರೆ.

ರವಿಯವರ ಅನೇಕ ಕಥೆಗಳಲ್ಲಿರುವಂತೆ ಇಲ್ಲಿಯೂ ಕೂಡಾ ಉಪಮೆಗಳನ್ನು ಕಾಣಬಹುದು.

ಉದಾ: ೧. ಮಂಚದ ಮಧ್ಯದಲ್ಲಿದ್ದ ತಟ್ಟೆಯತ್ತ ಸರಿದು ಕುಕ್ಕರಗಾಲಲ್ಲಿ ಕುಳಿತೆ, ಹುಳತಿನ್ನುವ ಜೇಡನಂತೆ.

೨. ಇಡೀ ಬ್ಯಾಗು ಬೋರಲು ಮಾಡಿ ಕೊಡವಿದೆ, ಬಂಜೆಯೊಬ್ಬಳು ಗರ್ಭಕೋಶ ಕೊಡವಿದಂತೆ

ಇಡೀ ಕಥೆ ನಿರೀಂದ್ರಿಯತೆ ಸ್ಥಿತಿಯಲ್ಲೇ ಸಾಗುತ್ತಿರುವಾಗ ಕಥೆಗೆ ತಿರುವು ನೀಡುವುದು ದೇವರ ಸಂಪುಟದ ಮುಂದಿದ್ದ ಪುಟ್ಟದಾದ ಕೆಂಪು ಪೆಟ್ಟಿಗೆ. ಅದರೊಳಗಿನ ಪತ್ರ ಕಥಾನಾಯಕ ಹಾಗೂ ಅವನ ತಂಗಿಯರ ಜನ್ಮರಹಸ್ಯವನ್ನು ಅನಾವರಣಗೊಳಿಸುವ ಸನ್ನಿವೇಶದೊಂದಿಗೆ ಕಥೆ ಮುಕ್ತಾಯಗೊಳ್ಳುತ್ತದೆ.

'ಕುಹು ಕುಹರ' ಹಾಗೂ 'ಪರಿಚಯ' ಕಥೆಯ ಕಥನಕ್ರಮದಂತೆ ನಿರೂಪಿತವಾಗುವ ಕಥೆ 'ಆಕ್ರಮಣ'. ಕಥೆಯ ಕಥಾನಾಯಕ ವಿಪರೀತ ಅಂತರ್ಮುಖಿ ಸ್ವಭಾವದವ ಹಾಗೂ ರಿಕ್ತ ಬದುಕಿನ ವ್ಯಕ್ತಿಯಾಗಿರುವುದರಿಂದ ಇಲ್ಲಿ ಕಥೆ ಕೂಡಾ ಅವನ ಮಾನಸಿಕ ಸ್ಥಿತಿಯನ್ನು ಎಳೆ ಎಳೆಯಾಗಿ ಬಿಡಿಸಿಡುತ್ತದೆ. ಕಥಾನಾಯಕ ತನ್ನ ಮನಸ್ಸಿನಲ್ಲಿ ಅಂದುಕೊಳ್ಳುವ ಮಾತುಗಳಿಂದ, ಆಲೋಚನೆಗಳಿಂದ ಕಥೆ ನಿರೂಪಣೆಯಾಗುತ್ತಾ ಸಾಗುತ್ತದೆ. ಕಥೆಯ ಆರಂಭದಲ್ಲೇ 'ಜಗತ್ತಿನ ಕ್ರೂರ ನೋವನ್ನು ಸಹ ಮೌನವಾಗಿ ಸಹಿಸಿಕೊಳ್ಳಬಲ್ಲ ವಿಚಿತ್ರ ಅಸಹನೆ ನನ್ನಲ್ಲಿದೆ. ಬಹುಶಃ ಇದು ಇದೆಯೆಂಬ ಕಾರಣದಿಂದಲೋ ಏನೋ ಬದುಕು ನನ್ನನ್ನು ಬಲು ಕೆಟ್ಟದಾಗಿ ನಡೆಸಿಕೊಂಡಿದೆ' ಎಂದು ತನ್ನ ಬಗ್ಗೆ ಪರಿಚಯಿಸಿಕೊಳ್ಳುವ ಕಥಾನಾಯಕ ತನ್ನ ಸ್ನೇಹಿತ ಸುಧೀಂದ್ರನ ಒತ್ತಾಯದ ಮೇರೆಗೆ ಮದುವೆಯಾಗುವುದು, ಹೆಂಡತಿಯೊಂದಿಗಿನ ಅಸಹಜ ಜೀವನ, ತನ್ನ ಅಂತರ್ಮುಖಿ ಸ್ವಭಾವ, ತನ್ನ ಹೆಂಡತಿಯೊಂದಿಗೆ ಅನೈತಿಕ ಸಂಬಂಧವಿಟ್ಟುಕೊಂಡಿರುವ ಸ್ನೇಹಿತ, ತನ್ನ ನಿರ್ವೀರ್ಯ ಸ್ಥಿತಿ ಇವುಗಳನ್ನೆಲ್ಲಾ ಯಾವುದೇ ಭಾವೋದ್ವೇಗ ತೋರ್ಪಡಿಸದೇ ಮೌನವಾಗಿಯೇ ನಿರೂಪಿಸುತ್ತಾನೆ. ತನ್ನ ಹೆಂಡತಿಯನ್ನು ನಗ್ನಗೊಳಿಸುತ್ತಿರುವ ಗೆಳೆಯ ಸುಧೀಂದ್ರನನ್ನು ಕಣ್ಣಾರೆ ನೋಡಿದರೂ ಯಾವುದೇ ಪ್ರತಿಕ್ರಿಯೆ ತೋರಿಸದೆ ತನ್ನ ಭಯಾನಕ ಮೌನದೊಳಗೆ ಮುಳುಗುವ ಕಥಾನಾಯಕನ ವ್ಯಕ್ತಿತ್ವವೇ ನಿರೀಂದ್ರಿಯ ಸ್ಥಿತಿಯನ್ನು ಹೊದ್ದುಕೊಂಡಂತೆ ನಿರೂಪಣೆಯಾಗಿದೆ. ಆರಂಭದಿಂದಲೂ ಕಥೆ ಒಂದು ರೀತಿಯ ಜಡತೆಯ ನಿರೂಪಣೆಯಲ್ಲಿ ಸಾಗಿದರೂ ಕಥೆಯ ಕೊನೆಯ ಬಯಲಾಗುವ ಸತ್ಯ ಕಥೆಯ ನಿಗೂಢತೆಯನ್ನು ಭೇದಿಸುತ್ತದೆ.

ಹೀಗೆ ರವಿ ಬೆಳಗೆರೆಯವರ ಒಟ್ಟು ಕಥೆಗಳ ಭಿನ್ನ ವಿಭಿನ್ನ ರೀತಿಯ ಕಥನಕ್ರಮವನ್ನು ವಿಶ್ಲೇಷಿಸಬಹುದು.

ರವಿಯವರ ಕಥೆಗಳು ಹಾಗೂ ಅವರ ನಿರೂಪಣಾ ಶೈಲಿಯ ಬಗ್ಗೆ ಲೇಖಕರಾದ 'ಜೋಗಿ' (ಗಿರೀಶ್‌ರಾವ್) ಹೀಗೆ ಹೇಳಿದ್ದಾರೆ...

"ಅದುವರೆಗೂ ಕನ್ನಡ ಕಥಾ ಜಗತ್ತು ಮುಟ್ಟಿ ನೋಡದ ಹಣಕಿ ಹಾಕದ ಜಗತ್ತೊಂದರಿಂದ ಕಥೆಗಳನ್ನು ತಂದು ಕೊಟ್ಟವರು ರವಿ ಬೆಳಗೆರೆ. 'ಪಾ.ವೆಂ. ಹೇಳಿದ ಕಥೆ' ಸಂಕಲನದ ಒಂದೊಂದು ಕಥೆಯೂ ಆ ಅರ್ಥದಲ್ಲಿ ಒಂದೊಂದು ಹೊಸ ವಸ್ತುವಿನೊಂದಿಗೆ ಹಾಜರಾಗುತ್ತದೆ. ಅವರಿಗೆ ಪ್ರೇಮ ಕಥೆಗಳಲ್ಲಿ ಅಂಥ ಆಸಕ್ತಿ ಇಲ್ಲ. ಹಾಗಂತ ಕಥೆಗಳಲ್ಲಿ ಸಹಜವಾಗಿ ಹುಟ್ಟುವ ಪ್ರೇಮಕ್ಕೆ ಅವರ ತಕರಾರಿಲ್ಲ. ಆಸಕ್ತಿ ಇಲ್ಲ. ದೈನಿಕದ ಬೋಗಾರು ಬದುಕನ್ನು ಜಂಜಡ ಎಂದು ಭಾವಿಸುವವರಂತೆ ಕಾಣಿಸುತ್ತಾರೆ ರವಿ, ಅವರ ಬರಹಗಳಲ್ಲಿ. ಬದುಕನ್ನು ವೈಭವೀಕರಿಸುವ ಆತ್ಮ ಮರುಕಕ್ಕೆ ಕಾರಣವಾಗುವ ಕಥೆಗಳನ್ನು ಅವರೆಂದೂ ಬರೆಯಲಿಲ್ಲ.

ರವಿಗೊಂದು ಸೊಗಸಾದ ಶೈಲಿಯಿದೆ. ಅದು ಅವರೇ ರೂಢಿಸಿಕೊಂಡ ನಿರೂಪಣಾ ಶೈಲಿ. ಬರೆದ ಒಂದು ಸಾಲು ಕೂಡಾ ವ್ಯರ್ಥವಾಗಬಾರದು. ಓದುಗರನ್ನು ತಲುಪದೇ ಉಳಿಯಬಾರದು. ಆತ ಅದರ ಅರ್ಥವನ್ನು ಹುಡುಕಿಕೊಂಡು ಅಲೆದಾಡುವಂತಾಗಬಾರದು ಎಂಬ ಎಚ್ಚರ ಪತ್ರಕರ್ತರಲ್ಲಷ್ಟೇ ಇರುವುದಕ್ಕೆ ಸಾಧ್ಯ. ಹೀಗಾಗಿ ಪತ್ರಕರ್ತ ಸರಳವಾದ ಮಾತುಗಳಲ್ಲಿ, ತನ್ನ ಕಣ್ಣೆದುರಿಗೆ ಇರುವ ಎಲ್ಲರಿಗೂ ಗೊತ್ತಿರುವ ರೂಪಕಗಳನ್ನು ಬಳಸುತ್ತಾ ತನ್ನ ಬರಹವನ್ನು ಸಮೃದ್ಧಗೊಳಿಸುತ್ತಾ ಹೋಗುತ್ತಾನೆ. ಅಂಥದ್ದರ ನಡುವೆಯೂ ಒಬ್ಬ ಪತ್ರಕರ್ತನಿಗೆ ತನ್ನದೇ ಆದ ಭಾಷೆಯೊಂದನ್ನು ಹುಡುಕಿಕೊಳ್ಳುವುದಕ್ಕೆ ಸಾಧ್ಯವಾದರೆ ಆತ ಗೆದ್ದಂತೆಯೇ.

ರವಿಗೆ ಮುಚ್ಚಿಡುವುದರಲ್ಲಿ ನಂಬಿಕೆ ಇಲ್ಲ. ಅದು ಸ್ವಂತದ 'ಖಾಸ್‌ಬಾತ್' ಆಗಲಿ, ಮತ್ತೊಂದು ಪಾತ್ರದ ಒಳಹೊಕ್ಕು ನೋಡುವ ಶೋಧಕ ದೃಷ್ಟಿಯೇ ಆಗಲಿ, ಜೀವನ ಚರಿತ್ರೆ, ಒಂದು ನಾಡಿನ ಕಥೆ, ಮತ್ಯಾವುದೋ ನಿಗೂಢ ಲೋಕದ ಅನಾವರಣ, ಸುಪ್ತ ಸಾಗರಕ್ಕೆ ಹಾಕುವ ಪಾತಾಳಗರಡಿ ಎಲ್ಲದರ ಹಿಂದೆಯೂ ನಿಂತು ಕಾಯುವ ಶಕ್ತಿ ಇದೇ.

ಇದು ಅವರ ಬರಹಗಳ ಶಕ್ತಿಯೂ ಆಗಿ ಪರಿಣಮಿಸಿದೆ. ನಿರೂಪಣಾ ಶೈಲಿಯಲ್ಲಾಗಲೀ, ಅಭಿವ್ಯಕ್ತಿಯ ಸ್ವರೂಪದಲ್ಲಾಗಲೀ, ಅನುಸಂಧಾನದಲ್ಲಾಗಲೀ ಅವರು ಯಾವುದನ್ನು ಸೂಚ್ಯವಾಗಿ ಹೇಳಲು ಹೊರಡುವುದಿಲ್ಲ. ಅವರ ಬರಹಗಳ ನಡುವೆ ಸಿಗುವ ಕಾವ್ಯದಂಥ ಸಾಲುಗಳು ಕೂಡ ನಿಚ್ಚಳವಾಗಿಯೇ ಎಲ್ಲವನ್ನೂ ಸೂಚಿಸುತ್ತವೆ. ಹಾಗೆ ನೋಡಿದರೆ ಸಾಹಿತ್ಯವನ್ನು ಸಂಕೇತಗಳ ಪಂಜರದಿಂದಾಚೆ ತಂದು ನಿಲ್ಲಿಸಿದವರು ಅವರೇ. ಅವರ ಅಕ್ಷರ ಜಗತ್ತಿನಲ್ಲಿ ಅಪರೂಪದ, ಎಲ್ಲೂ ಕೇಳದ ರೂಪಕಗಳು ಎದುರಾಗುತ್ತವೆ. ಆ ರೂಪಕಗಳ ಮೂಲಕ ಅವರು ತಾವು ಹೇಳಬೇಕು ಎಂದುಕೊಂಡಿರುವುದನ್ನು ಸ್ಪಷ್ಟವಾಗಿ ಎತ್ತರದ ದನಿಯಲ್ಲಿ ಹೇಳುತ್ತಾರೆ. ಈ ಎತ್ತರದ ದನಿಯನ್ನು ಸಾಹಿತ್ಯ ಲೋಕ ಗುಮಾನಿಯಿಂದ ನೋಡುತ್ತದೆ. ಪಿಸು ಮಾತಾಡುವವರ ಬಗ್ಗೆಯೇ ಅದಕ್ಕೆ ಅನುಪಮ ಪ್ರೀತಿ".[೧೩] ಎಂದು ವ್ಯಾಖ್ಯಾನಿಸಿದ್ದಾರೆ.

## ಕೊನೆ ಟಿಪ್ಪಣಿ

೧. ಪ್ರಸಾದ್‌ಸ್ವಾಮಿ.ಎಸ್, ಕಥೆ ಕಥನ, ಧಾತ್ರಿ ಪುಸ್ತಕ, ಬೆಂಗಳೂರು, ೨೦೦೭, ಪುಟ: ೨೪೪

೨. ರವಿ ಬೆಳಗೆರೆ, ಒಟ್ಟಾರೆ ಕಥೆಗಳು, ಭಾವನಾ ಪ್ರಕಾಶನ, ಬೆಂಗಳೂರು, ೧೯೯೮, ಪುಟ: ೦೧

೩. ಅದೇ ಕೃತಿ, ಪುಟ: ೦೮

೪. ಅದೇ ಕೃತಿ, ಪುಟ: ೧೧೮

೫. ಅದೇ ಕೃತಿ, ಪುಟ: ೧೨೫

೬. ಅದೇ ಕೃತಿ, ಪುಟ: ೧೪೦

೭. ಅದೇ ಕೃತಿ, ಪುಟ: ೪೬

೮. ಅದೇ ಕೃತಿ, ಪುಟ: ೧೧೪

೯. ಅದೇ ಕೃತಿ, ಪುಟ: ೧೫೯

೧೦. ಅದೇ ಕೃತಿ, ಪುಟ: ೧೭೦

೧೧. ಕನ್ನಡ ಪ್ರಭ: ದೀಪಾವಳಿ ವಿಶೇಷಾಂಕ-೨೦೦೮, ಪುಟ: ೧೭

೧೨. ಒಟ್ಟಾರೆ ಕಥೆಗಳು, ಪುಟ: ೧೪೯

೧೩. ಶರತ್ ಕಲ್ಕೋಡ್ (ಸಂ), ಫಸ್ಟ್‌ಹಾಫ್, ಭಾವನಾ ಪ್ರಕಾಶನ, ಬೆಂಗಳೂರು, ೨೦೦೮, ಪುಟ: ೨೩೦



## ಅಧ್ಯಾಯ ೬

# ಅಧ್ಯಯನದ ಫಲಿತಗಳು

'ರವಿ ಬೆಳಗೆರೆ ಅವರ ಕಥೆಗಳು: ಸಾಹಿತ್ಯಿಕ ವಿಶ್ಲೇಷಣೆ' ಎಂಬ ವಿಷಯದ ಹಿನ್ನೆಲೆಯಲ್ಲಿ ರವಿ ಬೆಳಗೆರೆ ಅವರ ಇದುವರೆಗಿನ ಸಮಗ್ರ ಕಥೆಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಕಂಡುಕೊಳ್ಳಲಾದ ಫಲಿತಗಳನ್ನು ಈ ಕೆಳಗಿನಂತೆ ವಿವರಿಸಬಹುದು.

೧. ರವಿಯವರ ಬಹುತೇಕ ಕಥೆಗಳಲ್ಲಿ ಗಂಡು–ಹೆಣ್ಣಿನ ದೈಹಿಕ ಮಿಲನದ ಚಿತ್ರಣ ಸಾಮಾನ್ಯವಾಗಿ ಕಾಣಿಸಿಕೊಂಡಿದೆ.

ಪಾ.ವೆಂ. ಹೇಳಿದ ಕಥೆ, ಭ್ರೂಣ ಸಂಭಾಷಣೆ, ಹಂತ, ಕುಹು ಕುಹರ, ವಿತಥ, ವಂಧ್ಯಾ, ವೇಷಗಳು, ಮಸೀದಿ ಬಿದ್ದ ಮೂರನೇ ದಿನ, ಆಕ್ರಮಣ, ನೆರಳು ಇವೆಲ್ಲಾ ಕಥೆಗಳಲ್ಲಿ ಮಿಲನದ ಸನ್ನಿವೇಶಗಳನ್ನು ಚಿತ್ರಿಸಲಾಗಿದೆ.

೨. ಬಹುತೇಕ ಕಥೆಗಳ ಅಂತ್ಯ 'ನಿಗೂಢತೆಯ ಅನಾವರಣ' ಹಾಗೂ 'ನಿಗೂಢತೆ ಹಾಗೇ ಉಳಿದು ಬಿಡುವಿಕೆ'ಯಿಂದ ಕೂಡಿವೆ.

'ಆಕ್ರಮಣ' ಕಥೆಯ ಕಥಾನಾಯಕನ ಮಗುವಿನ ಜನ್ಮರಹಸ್ಯ 'ಪರಿಚಯ' ಕಥೆಯ ನಾಯಕನ ಜನ್ಮರಹಸ್ಯ 'ಕೊನೆ' ಕಥೆಯ ಅನಿರೀಕ್ಷಿತ ಅಂತ್ಯ, 'ಮೈಕು' ಕಥೆಯಲ್ಲಿ ಲೌಡ್‌ಸ್ಪೀಕರ್‌ಗೂ, ಕಂಟ್ರೋಲ್‌ರೂಂನ ಮೈಕ್‌ಗೂ ಕನೆಕ್ಷನ್ ತಪ್ಪಿಸಲಾಗಿತ್ತು ಎಂಬ ಸತ್ಯ, 'ವಿತಥ' ಕಥೆಯ ಅನುಸೂಯಾಳ ಗರ್ಭದ ರಹಸ್ಯ, 'ಹೀಗೊಬ್ಬಳು ಸೀತಾದೇವಿ' ಕಥೆಯ ನಾಯಕಿ ಸೀತಾದೇವಿಯ ಸ್ವಭಾವ... ಇವುಗಳೆಲ್ಲಾ ಈ ಕಥೆಯಲ್ಲಿ ನಿಗೂಢತೆಯನ್ನುಂಟು ಮಾಡಿದರೂ ಕಥೆಯ ಅಂತ್ಯದಲ್ಲಿ ನಿಗೂಢತೆಯ ಅನಾವರಣವಾಗುತ್ತದೆ.

'ವೇಷಗಳು' ಕಥೆಯ ಅಂಜಪ್ಪ ಮಗುವಿನ ಜನ್ಮರಹಸ್ಯ ಗೊತ್ತಿಲ್ಲದ ಅದರ ತಂದೆ ಸಿಮ್ಮಣ್ಣ, 'ಭ್ರೂಣ ಸಂಭಾಷಣೆ' ಕಥೆಯ ಅಂತ್ಯದಲ್ಲಿ ಪ್ರತ್ಯಕ್ಷನಾಗುವ ನಿಗೂಢ ಫಕೀರ,

'ಸತ್ಯಭಾಮೆಯ ತೆಕ್ಕೆಯಿಂದ' ಕಥೆಯ ನಿಗೂಢ ಅಂತ್ಯ, 'ಗಿಡ್ಡಾಂಜನೇಯ ಸ್ವಾಮಿ' ಕಥೆಯ ಸಿರಿಜಾತ ಹಾಗೂ ಪಾರಿಜಾತರ ಗರ್ಭದ ರಹಸ್ಯ ಗೊತ್ತಿಲ್ಲದ ಸೋಡ ಮಲ್ಲೇಶಿ, 'ಬರುವನೇನೇ ಸಖಿ ಚೆಲುವ...' ಕಥೆಯ ಅಂತ್ಯದಲ್ಲಿ ನಾಯಕಿಯ ತಂದೆ ಅವಳ ಜನ್ಮರಹಸ್ಯವನ್ನು ನಿಗೂಢವನ್ನಾಗಿ ಸೃಷ್ಟಿಸುವ ರೀತಿ... ಇವೆಲ್ಲಾ ಕಥೆಯ ಅಂತ್ಯದಲ್ಲಿ ನಿಗೂಢತೆಯನ್ನು ಸೃಷ್ಟಿಸಿ, ಆ ನಿಗೂಢತೆ ಅನಾವರಣಗೊಳ್ಳದೇ ಹಾಗೇ ಉಳಿದು ಬಿಡುತ್ತದೆ.

೩. ಪ್ರಾದೇಶಿಕತೆಯ ಸೊಗಡು ಕೆಲವು ಕಥೆಗಳಲ್ಲಿ ಮೂಡಿಬಂದಿದೆ.

'ಪಾ.ವೆಂ. ಹೇಳಿದ ಕಥೆ', 'ಕೊನೆ', 'ಮೈಕು', 'ದಾರಿ' ಈ ಕಥೆಗಳಲ್ಲಿ ಹುಬ್ಬಳ್ಳಿ ನಗರದ ಜನಜೀವನದ ಚಿತ್ರಣವಿದೆ. ಉತ್ತರ ಕರ್ನಾಟಕದ ಭಾಷೆಯ ಸೊಗಸನ್ನು ಈ ಕಥೆಗಳಲ್ಲಿ ಕಾಣಬಹುದು. 'ವಂಧ್ಯಾ', 'ಗಿಡ್ಡಾಂಜನೇಯ ಸ್ವಾಮಿ' ಕಥೆಗಳಲ್ಲಿ ಬಳ್ಳಾರಿಯ ನಗರ ಹಾಗೂ ಈ ಭಾಗದ ಜನರ ಜೀವನ ವಿಧಾನ, ಆಡು ಭಾಷೆ ಚಿತ್ರಣಗೊಂಡಿದೆ. 'ಹಂತ' ಕಥೆ ಕೂಡಾ ಬಳ್ಳಾರಿ ಬಯಲು ಸೀಮೆಯ ಹೊಸಪೇಟೆ, ಹುಲಿಗಿ ಪ್ರದೇಶಗಳ ಚಿತ್ರಣವಿದೆ. ಇಲ್ಲಿಯ ಭೌಗೋಳಿಕ ಅಂಶಗಳು, ಮೂಢನಂಬಿಕೆ, ಸಂಪ್ರದಾಯಗಳು, ಆಚರಣೆ ಇವೆಲ್ಲವೂ ಕಥೆಯಲ್ಲಿ ಮಿಳಿತಗೊಂಡಿವೆ.

೪. ಬಹುತೇಕ ಕಥೆಗಳ ನಿರೂಪಣೆ ಹಾಗೂ ಸಂಭಾಷಣೆಗಳಲ್ಲಿ ವ್ಯಾಪಕವಾದ ಇಂಗ್ಲಿಷ್ ಭಾಷೆಯ ಬಳಕೆ ಮಾಡಲಾಗಿದೆ.

'ಶಾಲಿನಿ', 'ಕೊನೆ', 'ಹೀಗೊಬ್ಬಳು ಸೀತಾದೇವಿ', 'ಕುಹು ಕುಹರ', 'ದಾರಿ', 'ಬದುಕೊಂದು ಸತತ ಅಭ್ಯಾಸ', 'ಕತ್ತಲೆ ನೋವು ಮತ್ತು ಹೆಣ', 'ಬರುವನೇನೇ ಸಖಿ ಚೆಲುವ...' ಹೀಗೆ ಇನ್ನು ಅನೇಕ ಕಥೆಗಳಲ್ಲಿ ವ್ಯಾಪಕವಾದ ಇಂಗ್ಲಿಷ್ ಭಾಷೆ ಬಳಕೆಯಾಗಿರುವುದನ್ನು ಕಾಣಬಹುದು.

೫. ಅನೇಕ ಕಥೆಗಳು 'ಮೆಲೋ ಡ್ರಾಮಟಿಕ್' ಮಾದರಿಯಲ್ಲಿ ರಚಿಸಲ್ಪಟ್ಟಿವೆ.

'ಕುಹು ಕುಹರ', 'ಆಕ್ರಮಣ', 'ವೇಷಗಳು', 'ಪರಿಚಯ', 'ಕತ್ತಲೆ ನೋವು ಮತ್ತು ಹೆಣ', 'ವಿತಥ', 'ವಂಧ್ಯಾ' ಇತ್ಯಾದಿ ಕಥೆಗಳು ಮೆಲೋ ಡ್ರಾಮಟಿಕ್ ಮಾದರಿಯಲ್ಲಿ ರಚನೆಯಾಗಿರುವುದನ್ನು ಕಾಣಬಹುದು

೬. ನಿಜ ಜೀವನದ ಜೀವಂತ ವ್ಯಕ್ತಿಗಳೇ ಕಥೆಗಳಲ್ಲಿ ಪಾತ್ರವಾಗಿದ್ದಾರೆ.

ಅಂದಿನ 'ಕಸ್ತೂರಿ' ಮಾಸಪತ್ರಿಕೆಯ ಸಂಪಾದಕರಾಗಿದ್ದ ಪಾ.ವೆಂ. ಆಚಾರ್ಯ (ಪಾಡಿಗಾರು ವೆಂಕಟರಮಣ ಆಚಾರ್ಯ)ರೇ 'ಪಾ.ವೆಂ. ಹೇಳಿದ ಕಥೆ'ಯ ಪ್ರಮುಖ ಪಾತ್ರವಾಗಿದ್ದಾರೆ. 'ಕೊನೆ' ಕಥೆಯಲ್ಲಿ ಸ್ವತಃ ರವಿ ಬೆಳಗೆರೆಯವರೇ ತಮ್ಮನ್ನು ಒಂದು ಪಾತ್ರವಾಗಿ ಚಿತ್ರಿಸಿಕೊಂಡಿದ್ದಾರೆ. ಅಲ್ಲದೇ ಈ ಕಥೆಯಲ್ಲಿ ಅಶೋಕ್ ಶೆಟ್ಟರ್, ಅಜಯಕುಮಾರ್ ಪಾಟೀಲ ಇತ್ಯಾದಿ ಇನ್ನು ಅನೇಕ ನೈಜ ವ್ಯಕ್ತಿಗಳೇ ಈ ಕಥೆಯಲ್ಲಿ ಪಾತ್ರಗಳಾಗಿ, ಉಲ್ಲೇಖಗಳಾಗಿ ಚಿತ್ರಣಗೊಂಡಿದ್ದಾರೆ.

೭. ಕಥೆಗಳಲ್ಲಿ ವೈವಿಧ್ಯಮಯ ಭಾಷೆಗಳನ್ನು ಬಳಸಲಾಗಿದೆ.

ಉತ್ತರ ಕರ್ನಾಟಕದ ಕನ್ನಡ, ಬಳ್ಳಾರಿ ಕನ್ನಡ, ಇಂಗ್ಲಿಷ್ ಮಿಶ್ರಿತ ಕನ್ನಡ, ಹಿಂದಿ ಮಿಶ್ರಿತ ಕನ್ನಡ ಹೀಗೆ ಭಾಷೆಯ ವೈವಿಧ್ಯತೆ ಕಥೆಗಳಲ್ಲಿ ಕಾಣಬಹುದು. 'ಪಾ.ವೆಂ. ಹೇಳಿದ ಕಥೆ', 'ಕೊನೆ', 'ವಿತಥ', 'ದಾರಿ', 'ಮೈಕು' ಈ ಕಥೆಗಳಲ್ಲಿ ಉತ್ತರ ಕರ್ನಾಟಕದ ಭಾಷೆಯನ್ನು ಬಳಸಲಾಗಿದೆ. 'ವಂಧ್ಯಾ', 'ಹಂತ', 'ಗಿಡ್ಡಾಂಜನೇಯ ಸ್ವಾಮಿ', 'ನೆರಳು', 'ಮಸೀದಿ ಬಿದ್ದ ಮೂರನೇ ದಿನ', 'ವೇಷಗಳು', 'ಹೆಣದ ಮನೆಯಲ್ಲಿ' ಈ ಕಥೆಗಳಲ್ಲಿಯ ಪಾತ್ರಗಳ ಸಂಭಾಷಣೆಗಳೆಲ್ಲವೂ ಬಳ್ಳಾರಿ ಕನ್ನಡದಲ್ಲೇ ರಚಿತವಾಗಿವೆ. 'ಹೀಗೊಬ್ಬಳು ಸೀತಾದೇವಿ', 'ಶಾಲಿನಿ', 'ಬರುವನೇನೇ ಸಖಿ ಚೆಲುವ...', 'ಕೊನೆ', 'ಕುಹು ಕುಹರ' ಮುಂತಾದ ಕಥೆಗಳಲ್ಲಿ ಇಂಗ್ಲಿಷ್ ಭಾಷೆಯ ಬಳಕೆಯನ್ನು ಕಾಣಬಹುದು. 'ಕತ್ತಲೆ ನೋವು ಮತ್ತು ಹೆಣ' ಈ ಕಥೆಯಲ್ಲಿ ಹಿಂದಿ ಮಿಶ್ರಿತ ಬಳ್ಳಾರಿ ಭಾಷೆ ಬಳಕೆಯಾಗಿದೆ.

೮. ಬಹುತೇಕ ಕಥೆಗಳ ಪಾತ್ರಗಳು ತಮ್ಮ ಮನಸ್ಸಿನೊಳಗೆ ಮಾತಾಡಿಕೊಳ್ಳುತ್ತವೆ.

'ಪರಿಚಯ' ಕಥೆಯ ನಾಯಕ ಶ್ರೀವತ್ಸ, 'ಕುಹು ಕುಹರ' ಕಥೆಯ ಕಲಾವಿದ, 'ಆಕ್ರಮಣ' ಕಥೆಯ ಕಥಾನಾಯಕ, 'ಮಸೀದಿ ಬಿದ್ದ ಮೂರನೇ ದಿನ' ಕಥೆಯ ಗುರುಸಾಂತ, 'ಕತ್ತಲೆ ನೋವು ಮತ್ತು ಹೆಣ' ಕಥೆಯ ಹುಸೇನಸಾಬ ಹೀಗೆ ಅನೇಕ ಪಾತ್ರಗಳು ತಮ್ಮ ಮನಸ್ಸಿನೊಳಗೇ ಮಾತನಾಡಿಕೊಳ್ಳುವ ಮಾತುಗಳೇ ದಟ್ಟವಾಗಿ ಮೂಡಿಬಂದಿವೆ.

೯. ಉಪಮೆ ಮತ್ತು ರೂಪಕಗಳ ಬಳಕೆ ಪ್ರತಿ ಕಥೆಯಲ್ಲೂ ಕಂಡು ಬರುತ್ತದೆ.

೧೦. ನಾಟಕೀಯತೆಯ ಬರವಣಿಗೆಯ ಚೆಲುವು ಬಹುತೇಕ ಕಥೆಗಳಲ್ಲಿ ಕಂಡು ಬರುತ್ತದೆ.

೧೧. ಕಥೆಗಳಲ್ಲಿ ಭಾವಸೂಚಕ ('!') ಚಿಹ್ನೆಯ ಬಳಕೆ ವಿಪರೀತವಾಗಿ ಕಂಡು ಬರುತ್ತದೆ.

೧೨. ಅನೇಕ ಕಥೆಗಳು ಆರಂಭವಾದ ನಂತರ ಕಥೆಯ ಹಿನ್ನೆಲೆ (ಫ್ಲಾಷ್ ಬ್ಯಾಕ್)ಯನ್ನು ತೆರೆದಿಡುತ್ತಾ ಸಾಗುತ್ತವೆ.



## ಅಧ್ಯಾಯ ೭

# ಸಮಾರೋಪ

ಕನ್ನಡ ಪತ್ರಿಕೋದ್ಯಮ ಹಾಗೂ ಕನ್ನಡ ಸಾಹಿತ್ಯ ಲೋಕದಲ್ಲಿ ತಮ್ಮದೇ ಆದ ವಿಶಿಷ್ಟ ಛಾಪನ್ನು ಮೂಡಿಸಿದ ರವಿ ಬೆಳಗೆರೆಯವರು ತಮ್ಮ ಬರಹಗಳ ಮೂಲಕ ಬೃಹತ್ ಓದುಗ ಸಮೂಹವನ್ನು ಸೃಷ್ಟಿಸಿಕೊಂಡಿರುವುದು ಅತಿಶಯೋಕ್ತಿಯೇನಲ್ಲ. ಇಂಗ್ಲಿಷ್, ಹಿಂದಿ, ಉರ್ದು, ತೆಲುಗು ಭಾಷೆಗಳಲ್ಲಿ ಪರಿಣಿತರಾಗಿರುವ ರವಿಯವರು ಆಯಾ ಭಾಷೆಗಳಲ್ಲಿನ ಅಪರೂಪದ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡುವ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್, ಖುಷ್‌ವಂತ್ ಸಿಂಗ್, ಹುಸೇನ್ ಜೈದಿ, ಪ್ರೋತಿಮಾ ಬೇಡಿ, ಚಲಂ, ವಿನೋದ್ ಮೆಹ್ತಾ, ಓಷೋ ರಜನೀಶ್, ಬ್ರಿಗೇಡಿಯರ್ ಜಾನ್. ಪಿ.ದಳವಿ. ಮನೋಹರ ಮಳಗಾಂವಕರ್ ಮುಂತಾದವರ ಕೃತಿಗಳನ್ನು ಕನ್ನಡಕ್ಕೆ ಆಪ್ತವಾದ ಶೈಲಿಯಲ್ಲಿ ಅನುವಾದ ಮಾಡಿದ್ದಾರೆ. ಕಳೆದ ೩೦ ವರ್ಷದ ಅವಧಿಯಲ್ಲಿ ಪತ್ರಿಕೋದ್ಯಮದ ಜೊತೆ ಜೊತೆಯಲ್ಲೇ ಸಾಹಿತ್ಯ ಕೃತಿಗಳನ್ನು ರಚಿಸುತ್ತಾ ಎರಡರಲ್ಲೂ ಜನಪ್ರಿಯತೆಯನ್ನು ಗಳಿಸಿಕೊಂಡವರು. ಸುಮಾರು ೬೦ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿರುವ ರವಿ ಬೆಳಗೆರೆಯವರು ಕನ್ನಡದ ಅಪರೂಪದ ಬರಹಗಾರರು. ಅವರ ಕೃತಿಗಳು ಕೂಡಾ ತುಂಬಾ ವೈವಿಧ್ಯಮಯವಾದವುಗಳು. ಕಥೆ, ಕಾದಂಬರಿ, ಅಂಕಣ ಬರಹ, ಆತ್ಮಕಥನ, ಜೀವನ ಚರಿತ್ರೆ, ಅನುವಾದ, ಪತ್ರ ಸಾಹಿತ್ಯ, ಪ್ರವಾಸ ಕಥನ, ಯುದ್ಧ, ವರದಿಗಾರಿಕೆ, ಇತಿಹಾಸ, ರಾಜಕೀಯ, ಅಪರಾಧ, ಭೂಗತ ಜಗತ್ತು, ವಾಮಾಚಾರ, ತನಿಖೆ... ಹೀಗೆ ವಿಸ್ತಾರಗೊಳ್ಳುತ್ತಾ ಸಾಗುತ್ತದೆ ರವಿಯವರ ಕೃತಿಗಳ ವೈವಿಧ್ಯತೆ. 'ನಾಟಕ' ಪ್ರಕಾರವೊಂದನ್ನು (ಈ ಹಿಂದೆ ನಾಟಕಗಳನ್ನೂ ರಚಿಸಿದ್ದರೂ ಅವು ಅಧೀಕೃತವಾಗಿ ಎಲ್ಲೂ ಪ್ರಕಟಗೊಂಡಿಲ್ಲ) ಹೊರತುಪಡಿಸಿದರೆ ಉಳಿದೆಲ್ಲಾ ಸಾಹಿತ್ಯ ಪ್ರಕಾರಗಳಲ್ಲಿಯೂ ಅವರು ಕೃತಿಗಳನ್ನು ರಚಿಸಿದ್ದಾರೆ.

ಮುದ್ರಣ ಮಾಧ್ಯಮದ ಜೊತೆಗೆ ಎಲೆಕ್ಟ್ರಾನಿಕ್ ಮಾಧ್ಯಮದ (ದೂರದರ್ಶನ, ರೇಡಿಯೋ, ಅಂತರ್ಜಾಲ, ಸಿ.ಡಿ) ಮೂಲಕವೂ ಓದುಗರನ್ನು, ಶೋತೃಗಳನ್ನು, ವೀಕ್ಷಕರನ್ನು ತಲುಪಿದ್ದಾರೆ. ಚಲನಚಿತ್ರಗಳಿಗೂ ಕಥೆ, ಚಿತ್ರಕಥೆ, ಸಂಭಾಷಣೆಯನ್ನು ಬರೆದಿರುವ ರವಿಯವರು ಕೆಲವು ಚಲನಚಿತ್ರಗಳಲ್ಲಿ, ದೂರದರ್ಶನದ ಧಾರವಾಹಿಗಳಲ್ಲೂ ನಟಿಸಿದ್ದಾರೆ. ಜೊತೆಗೆ 'ಮುಖ್ಯಮಂತ್ರಿ ಐ ಲವ್ ಯೂ' ಎಂಬ ಕನ್ನಡ ಚಿತ್ರವನ್ನು ನಿರ್ಮಿಸಿ, ನಿರ್ದೇಶಿಸಿ, ಕಥೆ, ಸಂಭಾಷಣೆಯನ್ನು ಬರೆಯುವುದರೊಂದಿಗೆ ಆ ಚಿತ್ರದ ಮುಖ್ಯಪಾತ್ರದಲ್ಲಿ ನಟಿಸಿದ್ದಾರೆ. ಇವೆಲ್ಲವೂ ಅವರ ಸೃಜನಶೀಲತೆಯ ವಿವಿಧ ರೂಪಗಳನ್ನು ಪರಿಚಯಿಸುತ್ತದೆ.

ತಮ್ಮ ಆತ್ಮಕಥನ 'ಖಾಸ್‌ಬಾತ್'ನ್ನು ಕೂಡಾ ಕಥೆಯೇನೋ ಎಂಬಂತೆ ಸೊಗಸಾಗಿ ಬರೆಯಬಲ್ಲ ರವಿಯವರು ಅತೀ ಚಿಕ್ಕ ವಯಸ್ಸಿನಲ್ಲೇ (೨೪ ವರ್ಷ) ಅನುವಾದ (ವಿವಾಹ: ಹುಟ್ಟು ಮತ್ತು ಪೂರ್ವೋತ್ತರ)ಕ್ಕಾಗಿ ಕರ್ನಾಟಕ ರಾಜ್ಯ ಸಾಹಿತ್ಯ ಅಕ್ಯಾಡೆಮಿ ಪ್ರಶಸ್ತಿ ಪಡೆದವರು. ೨೧ನೇ ವಯಸ್ಸಿನಲ್ಲಿ ಬರೆದ 'ದಾರಿ' ಕಥಾಸಂಕಲನದ ಕಥೆಗಳ ವಸ್ತು, ಭಾಷೆ, ನಿರೂಪಣಾ ಕ್ರಮ ವಿಶಿಷ್ಟವಾದದ್ದು. ಅದರಲ್ಲೂ 'ಹಂತ' ಕಥೆ ಓದುಗರನ್ನು ಬೇರೊಂದು ಜಗತ್ತಿಗೆ ಕರೆದೊಯ್ದು ಅಚ್ಚರಿಯನ್ನುಂಟು ಮಾಡುತ್ತದೆ. ಕಥೆಗಳಲ್ಲಿ ಕೂಡಾ ರವಿಯವರು ಸ್ತ್ರೀ ಪಾತ್ರಗಳನ್ನು ಪರಿಣಾಮಕಾರಿಯಾಗಿ 'ವೇಷಗಳು' ಕಥೆಯ ಶಿವಿ ಮುಂತಾದ ಸ್ತ್ರೀ ಪಾತ್ರಗಳ ಮೂಲಕ ಸ್ತ್ರೀಯರ ಅಂತರಂಗದಲ್ಲಿಯ ನೋವಿನ ಕದತಟ್ಟುವ ಪ್ರಯತ್ನ ಮಾಡಿದ್ದಾರೆ. ಅಪರಾಧವನ್ನು ತುಂಬಾ ವೈಭವೀಕರಿಸಿ ಬರೆಯುತ್ತಾರೆ ಎಂಬ ಅಪವಾದ ರವಿಯವರ ಮೇಲಿದ್ದರೂ ಅವರ ಕ್ರೈಂ ಕೃತಿಗಳಲ್ಲಿ ಅಪರಾಧಿಗಳ ಮನಸ್ಸಿನಲ್ಲಿ ಮನುಷ್ಯತ್ವದ ಸೆಳಕನ್ನು ಹುಡುಕಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಕೇವಲ ಕ್ರೈಂ ಬರಹಕ್ಕೆ ಸೀಮಿತವಾಗದೇ ಅದರಾಚೆಗೂ ಸಾಹಿತ್ಯವನ್ನು ವಿಸ್ತರಿಸಿದವರು ರವಿ. ಬಹುತೇಕ ಕನ್ನಡಿಗರಿಗೆ ಅಪರಿಚಿತವಾಗಿಯೇ ಉಳಿದಿದ್ದ ಶ್ರೇಷ್ಠ ಭಾರತೀಯ ಇಂಗ್ಲಿಷ್ ಲೇಖಕ 'ಮನೋಹರ್ ಮಳಗಾಂವ್‌ಕರ್'ರನ್ನು ಕನ್ನಡಕ್ಕೆ ಪರಿಚಯಿಸಿ, ಅವರ ಅಪರೂಪದ ಕೃತಿಗಳನ್ನು ಇಂಗ್ಲಿಷ್‌ನಿಂದ ಕನ್ನಡಕ್ಕೆ ಸಮರ್ಥವಾಗಿ ಅನುವಾದಿಸಿದ ಹೆಗ್ಗಳಿಕೆ ರವಿಯವರದು. ಅತ್ಯಮೂಲ್ಯವಾದ ಕೃತಿಗಳನ್ನು ರಚಿಸಿ, ಅನುವಾದಿಸಿ ಕನ್ನಡಕ್ಕೆ ಕೊಡುಗೆಯಾಗಿ ನೀಡುವ ಮೂಲಕ ಕನ್ನಡ ಸಾಹಿತ್ಯ ಜಗತ್ತನ್ನು ಶ್ರೀಮಂತಗೊಳಿಸಿದ್ದಾರೆ.

ವ್ಯಾಪಕವಾಗಿ ಹಾಗೂ ವೈವಿಧ್ಯಮಯವಾಗಿ ಬರೆದಿರುವ ರವಿಯವರ ಎಲ್ಲಾ ಕೃತಿಗಳು (ಕಥೆಗಳನ್ನು ಹೊರತುಪಡಿಸಿ) ವಿಮರ್ಶೆಯ ನಿರ್ಲಕ್ಷ್ಯಕ್ಕೆ ಒಳಗಾಗಿರುವುದು ವಿಷಾದನೀಯ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರವಿ ಬೆಳಗೆರೆಯವರ ಸ್ಥಾನಮಾನ, ಅವರ ಬರವಣಿಗೆಯನ್ನು ಕುರಿತಂತೆ ಲೇಖಕರಾದ 'ಜೋಗಿ' (ಗಿರೀಶ್‌ರಾವ್) ಹೀಗೆ ಹೇಳಿದ್ದಾರೆ...

"ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರವಿ ಬೆಳಗೆರೆ ಸ್ಥಾನಮಾನವೇನು? ಅನ್ನುವ ಪ್ರಶ್ನೆಗೆ ಉತ್ತರಿಸುವ ಅಗತ್ಯವಿಲ್ಲ. ಯಾಕೆಂದರೆ, ಚರಿತ್ರೆಯ ನಿರ್ಮಾಪಕರು ಯಾರು? ಎಂಬ

ಪ್ರಶ್ನೆಗೆ ತುಂಬ ಅಸಮರ್ಪಕವಾದ ಉತ್ತರ ಸಿಗುತ್ತದೆ. ಇವತ್ತು ಕನ್ನಡದಲ್ಲಿ ಅತ್ಯಂತ ಹೆಚ್ಚು ಮಾರಾಟವಾಗುವುದು ರವಿ ಬೆಳಗೆರೆ ಕೃತಿ. ಎರಡನೇ ಸ್ಥಾನ ಡಾ. ಎಸ್.ಎಲ್. ಭೈರಪ್ಪ. ಮೂರನೇ ಸ್ಥಾನ ತೇಜಸ್ವಿ ಇದ್ದಾರೆ.

ಸಂತೋಷದ ಸಂಗತಿಯೆಂದರೆ ಈ ಮೂವರೂ ವಿಮರ್ಶೆಯನ್ನೂ, ವಿಮರ್ಶಕರನ್ನೂ ಮೀರಿದವರು. ಕನ್ನಡ ಓದುಗರ ಬಳಗವನ್ನು ಹೆಚ್ಚಿಸಿದವರು. ಇವರ ಪುಸ್ತಕ ಹೀಗಿದೆ ಎಂದು ಯಾರೂ ಸರ್ಟಿಫಿಕೇಟು ಕೊಡಬೇಕಾಗಿಲ್ಲ. ಹೇಗಿದ್ದರೂ ಓದುತ್ತಾರೆ ಮತ್ತು ಹೇಗಿದೆ ಅನ್ನುವುದು ಎಲ್ಲರಿಗೂ ಗೊತ್ತಿರುತ್ತದೆ. ಯುಟಿಲಿಟಿ ಬಯಸುವ ಲೆಕ್ಕಾಚಾರದ ಓದುಗನಿಗೂ, ಕೇವಲ ಆನಂದವನ್ನಷ್ಟೇ ಬಯಸುವ ನಿಜದ ಓದುಗನಿಗೂ ಏಕಕಾಲಕ್ಕೆ ಸಂತೋಷ ಕೊಡುವಂತೆ ಬರೆಯಬಲ್ಲರು ಈ ಮೂವರು.

ಕನ್ನಡ ಮಾತಿಗೆ ಬಂದರೆ ಪಾಪ್ಯುಲಾರಿಟಿ ಶತ್ರು ಎಂದು ಭಾವಿಸುವ ಬಹುದೊಡ್ಡ ಲೇಖಕರ ಬಳಗ ನಮ್ಮಲ್ಲಿದೆ. ಅವರು ಜನಪ್ರಿಯತೆಯ ಕಡು ವಿರೋಧಿ. ಹೆಚ್ಚು ಮಂದಿ ಓದಿದರೆ ಅದು ಒಳ್ಳೆಯ ಕೃತಿಯಲ್ಲ ಎಂಬ ಗುಮಾನಿ. ಹತ್ತು ವರ್ಷಗಳಲ್ಲಿ ಸಾವಿರ ಪ್ರತಿ ಖರ್ಚಾದರೆ ಅದು ಯಶಸ್ವಿ ಕಾದಂಬರಿ. ಅಂಥದ್ದರ ನಡುವೆ ಗೆದ್ದು ನಿಂತವರು ರವಿ ಬೆಳಗೆರೆ.

ಕನ್ನಡ ಸಾಹಿತ್ಯ ಚರಿತ್ರೆ ಹೀಗೆ ಅನೇಕರನ್ನು ಸಾಹಿತ್ಯ ಚರಿತ್ರೆಯ ಯಾವುದೇ ಕಾಲಘಟ್ಟಕ್ಕಾಗಲೀ, ಪಂಥಕ್ಕಾಗಲೀ ಸೇರಿಸುವಲ್ಲಿ ಸೋತು ಕುಂತಿದೆ. ಅನಕೃ, ರಾಮಮೂರ್ತಿ, ತರಾಸು, ಬೀಚಿ, ಟಿ.ಕೆ. ರಾಮರಾವ್, ದೇವುಡು, ತೇಜಸ್ವಿ, ಭೈರಪ್ಪ–ಇವರೆಲ್ಲ ನವ್ಯವೂ ಅಲ್ಲದ ನವ್ಯೋತರವೂ ಅಲ್ಲದ, ಪ್ರಗತಿಶೀಲರೂ ಅಲ್ಲದ– ಕನ್ನಡ ಓದುಗರನ್ನು ಮನಸ್ಸಿನಲ್ಲಿಟ್ಟುಕೊಂಡು ಬರೆಯುತ್ತಾ ಹೋದವರು. ಕನ್ನಡದ ಕಣ್ತೆರೆಸಿದ ಲೇಖಕರು ಎಂದು ಕರೆಯಬಹುದಾದವರು. ಆ ಸಾಲಲ್ಲೇ ರವಿ ಬೆಳಗೆರೆ ಕೂಡಾ ಬರುತ್ತಾರೆ".[೧] ಎಂದಿದ್ದಾರೆ.

## ಕೊನೆ ಟಿಪ್ಪಣಿ

೧. ಶರತ್ ಕಲ್ಕೋಡ್ (ಸಂ), ಫಸ್ಟ್‌ಹಾಫ್, ಭಾವನಾ ಪ್ರಕಾಶನ, ಬೆಂಗಳೂರು, ಪುಟ: ೨೩೧



## ೧. ಸಂಕ್ಷಿಪ್ತ ಪರಿಚಯ

ರವಿ ಬೆಳಗೆರೆಯವರ ಪೂರ್ವಜರು ಆಂಧ್ರ ಪ್ರದೇಶದ ಮುಲಕನಾಡು ಪ್ರದೇಶದವರು. ೧೭ನೇ ಶತಮಾನದಲ್ಲಿ ಕರ್ನಾಟಕಕ್ಕೆ ವಲಸೆ ಬಂದು ಇಲ್ಲೇ ನೆಲೆಸಿದರು. ಮೈಸೂರು ಮಹಾರಾಜರು ನೀಡಿದ ಇನಾಮತಿ ಜಮೀನಿನಲ್ಲಿ ಜೀವನ ಸಾಗಿಸುತ್ತಿದ್ದರು. ರವಿಯವರ ಮುತ್ತಜ್ಜ (ತಾಯಿಯ ತಾತ) ನರಸಿಂಹಭಟ್ಟರು ಕಂಚಿಯಲ್ಲಿ ವಿದ್ಯಾಭ್ಯಾಸ ಮಾಡಿ ಸಂಸ್ಕೃತದಲ್ಲಿ ಪ್ರಕಾಂಡ ಪಾಂಡಿತ್ಯವನ್ನು ಗಳಿಸಿಕೊಂಡು ಛಂದೋಬದ್ಧವಾಗಿ ಕಾವ್ಯ ರಚನೆ ಮಾಡುತ್ತಿದ್ದರು. ಇವರ ಮಗ ಚಂದ್ರಶೇಖರ ಶಾಸ್ತ್ರಿಗಳೂ ವೇದಗಳನ್ನೆಲ್ಲಾ ಅಧ್ಯಯನ ಮಾಡಿದವರು. ಕವಿತೆ, ಹಾಡುಗಳನ್ನು ರಚಿಸಿ ಹಾಡುತ್ತಿದ್ದವರು. ಬ್ರಾಹ್ಮಣರಾಗಿದ್ದರೂ ಜಾತಿ, ಮತಗಳ ಸಂಕುಚಿತತೆಯನ್ನು ಮೀರಿದವರಾಗಿದ್ದರು. ಇವರ ಧರ್ಮಪತ್ನಿ ಶ್ರೀಮತಿ ಅನ್ನಪೂರ್ಣಮ್ಮನವರು. ಈ ದಂಪತಿಗಳಿಗೆ ಒಟ್ಟು ಹತ್ತು ಮಕ್ಕಳಾದರೂ ಅದರಲ್ಲಿ ಬದುಕುಳಿದಿದ್ದು ಏಳು ಮಕ್ಕಳು ಮಾತ್ರ. ಹಿರಿಯ ಮಗ ಸೀತಾರಾಮ ಶಾಸ್ತ್ರೀ, ಜಾನಕಮ್ಮ ನಂತರದ ಮೂರು ಮಕ್ಕಳು ಅಕಾಲಿಕ ಸಾವಿಗೀಡಾಗುತ್ತವೆ. ಅದಾದ ನಂತರ ಕ್ರಮವಾಗಿ ಸಾವಿತ್ರಮ್ಮ, ರುಕ್ಮಿಣಮ್ಮ, ಕೃಷ್ಣಶಾಸ್ತ್ರಿಗಳು, ಪಾರ್ವತಮ್ಮ, ಶ್ಯಾಮಣ್ಣ ಈ ಮಕ್ಕಳು ಜನಿಸುತ್ತಾರೆ. ಶಾಮಣ್ಣ ಕೂಡಾ ತೀರಾ ಚಿಕ್ಕ ವಯಸ್ಸಿನಲ್ಲೇ ಮರಣ ಹೊಂದುತ್ತಾನೆ.

ಬೆಳಗೆರೆ ಚಂದ್ರಶೇಖರ ಶಾಸ್ತ್ರಿಗಳ ಕಿರಿಯ ಮಗಳಾದ ಬೆಳಗೆರೆ ಪಾರ್ವತಮ್ಮನವರು ಬಾಲ್ಯದಲ್ಲೇ (ಹನ್ನೆರನೇ ವಯಸ್ಸಿನಲ್ಲಿ) ಮದುವೆಯಾಗಿ ಜೀವನದಲ್ಲಿ ತುಂಬಾ ನೋವು, ಕಷ್ಟಗಳನ್ನು ಅನುಭವಿಸಿದವರು. ಸ್ವತಃ ಕವಯಿತ್ರಿಯೂ ಆಗಿದ್ದ ಬೆಳಗೆರೆ ಪಾರ್ವತಮ್ಮನವರು ಪದರುಗಳು (ಕಥಾಸಂಕಲನ), ಮೂರು ದೀಪಾವಳಿ (ಕಾದಂಬರಿ) ಹೂ ಗೊಂಚಲು (ಕವನ ಸಂಕಲನ) ಕೃತಿಗಳನ್ನು ರಚಿಸಿ, ಪ್ರಕಟಿಸಿದ್ದಾರೆ. ಇವರ ಏಕೈಕ ಸಂತಾನವೇ 'ರವಿ ಬೆಳಗೆರೆ'.

ತಮ್ಮ ೩೬ನೇ ವಯಸ್ಸಿನವರೆಗೆ ನೋವು, ನಿರಾಸೆ, ಅವಮಾನ, ಬಡತನ, ಸೋಲುಗಳೊಂದಿಗೇ ಜೀವನ ಕಳೆದ ರವಿ ಬೆಳಗೆರೆಯವರು ನಂತರ ಸಾಧಿಸಿದ ಸಾಧನೆಗಳು ನಿಜಕ್ಕೂ ವಿಸ್ಮಯ ಮೂಡಿಸುತ್ತವೆ. ೧೯೯೫ರಲ್ಲಿ ಪ್ರಾರಂಭಿಸಿದ 'ಹಾಯ್ ಬೆಂಗಳೂರ್!' ಪತ್ರಿಕೆ ಅವರ ಬದುಕಿನಲ್ಲಿ ಯಶಸ್ಸು, ಖ್ಯಾತಿಗಳ ಅಲೆಯನ್ನೇ ತಂದಿತು.

ರವಿ ಬೆಳಗೆರೆಯವರ ಆತ್ಮಕಥನ 'ಖಾಸ್‌ಬಾತ್' ಅವರ ಬದುಕಿನ ಏಳು–ಬೀಳು, ಸೋಲು–ಸಾಧನೆಗಳನ್ನು ಚಿತ್ರಿಸುತ್ತದೆ. 'ಬೆತ್ತಲೆಯಾದಷ್ಟು ಮನುಷ್ಯ ಮಾನವಂತನಾಗುತ್ತಾನೆ' ಎಂಬ ಸಿದ್ಧಾಂತವನ್ನು ಆದರ್ಶವಾಗಿಟ್ಟುಕೊಂಡಿರುವ ರವಿಯವರು ತಮ್ಮ ಆತ್ಮಕಥನದಲ್ಲೂ ಕೂಡಾ ಅದನ್ನೇ ಪಾಲಿಸಿದ್ದಾರೆ. ತಮ್ಮ ಬದುಕಿನ ನೋವು–ನಲಿವುಗಳನ್ನು, ಪ್ರೇಮ ವೈಫಲ್ಯವನ್ನು, ನಿರ್ಲಜ್ಜ ಸ್ಥಿತಿಯನ್ನು, ಕುಡಿತದ ದಿನಗಳನ್ನು ಇವೆಲ್ಲವನ್ನು ಅತ್ಯಂತ ಪ್ರಾಮಾಣಿಕವಾಗಿ, ಸ್ಪಷ್ಟವಾಗಿ ಚಿತ್ರಿಸಿಕೊಂಡಿದ್ದಾರೆ. ಅವರ ಸಾಧನೆಗಳನ್ನು ಕೂಡಾ ಆತ್ಮರತಿಗೆ ಒಳಗಾಗದಂತೆ ಬರೆದಿದ್ದಾರೆ. ರವಿ ಬೆಳಗೆರೆಯವರು ತಮ್ಮ ಇಡೀ ಬದುಕಿನ ಚಿತ್ರಣವನ್ನು ತಮ್ಮದೇ ಆದ ಬರವಣಿಗೆಯಲ್ಲಿ, ಕೆಲವೇ ಸಾಲುಗಳಲ್ಲಿ, ವಿಶಿಷ್ಟವಾದ ಶೈಲಿಯಲ್ಲಿ ಓದುಗರಿಗೆ ಪರಿಚಯಿಸಿಕೊಳ್ಳುವ ಬಗೆ ಹೀಗೆ...

**ಅಫಿಡವಿಟ್ಟು**

'ಬರವಣಿಗೆಯೊಂದರಿಂದಲೇ ಅನ್ನ ಮತ್ತು ಆತ್ಮ ಸಂತೋಷ ದುಡಿದುಕೊಳ್ಳಲು ತೀರ್ಮಾನಿಸಿದಂತೆ ಬದುಕುತ್ತಿರುವವನು ನಾನು. ಬರವಣಿಗೆ ಬಿಟ್ಟು ಬೇರೆ ಏನನ್ನೂ ಮಾಡಲು ನನಗೆ ಬಾರದು ಅಂತ ತೀರ್ಮಾನಿಸಿ ಆಗಿದೆ.

ನನಗೀಗ ಐವತ್ತೊಂದು ವರ್ಷ ವಯಸ್ಸು. ಹುಟ್ಟಿದ್ದು ೧೯೫೮ರ ಮಾರ್ಚ್ ೧೫ರಂದು, ಬಳ್ಳಾರಿಯಲ್ಲಿ. ಎರಡು ವರ್ಷ ತುಮಕೂರಿನ ಸಿದ್ಧಗಂಗಾ ಹೈಸ್ಕೂಲಿನಲ್ಲಿ ಓದಿದುದನ್ನು ಬಿಟ್ಟರೆ ಬಿ.ಎ. ವರೆಗಿನ ವ್ಯಾಸಂಗ ನಡೆದದ್ದು ಬಳ್ಳಾರಿಯಲ್ಲಿ. ನಂತರ ಓದಿದ್ದು ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗದಲ್ಲಿ ಸ್ನಾತಕೋತ್ತರ ಪದವಿಗಾಗಿ; ಧಾರವಾಡದಲ್ಲಿ. ಕೆಲಕಾಲ ಬಳ್ಳಾರಿ, ಹಾಸನ ಮತ್ತು ಹುಬ್ಬಳ್ಳಿಯ ಕಾಲೇಜುಗಳಲ್ಲಿ ಇತಿಹಾಸ ಉಪನ್ಯಾಸಕನಾಗಿ ಕೆಲಸಮಾಡಿದೆ. ಅದಕ್ಕೆ ಮುಂಚೆ ಮತ್ತು ಅದರ ನಂತರ ಸರಿಸುಮಾರು ಒಂಬತ್ತು ವೃತ್ತಿ ಬದಲಿಸಿದೆ. ಹೈಸ್ಕೂಲು ಮೇಷ್ಟ್ರು, ಹೋಟೆಲು ಮಾಣಿ, ರೂಮ್‌ಬಾಯ್, ರಿಸೆಪ್ಷನಿಷ್ಟ್, ಹಾಲು ಮಾರುವ ಗೌಳಿ, ದಿನಪತ್ರಿಕೆ ಹಂಚುವ ಹುಡುಗ, ಮೆಡಿಕಲ್ ರೆಪ್ರೆಸೆಂಟೇಟಿವ್, ಪ್ರಿಂಟಿಂಗ್ ಪ್ರೆಸ್‌ನ ಮಾಲೀಕ, ಥಿಯೇಟರ್‌ನಲ್ಲಿ ಗೇಟ್‌ಕೀಪರ್, ಕಾಲೇಜಿನಲ್ಲಿ ಉಪನ್ಯಾಸಕ, ಮನೆ ಪಾಠದ ಮೇಷ್ಟ್ರು– ಹೀಗೆ ನಾನಾ ಕಡೆ ಮೈ ಕೈ ಮೆತ್ತಗಾಗಿಸಿಕೊಂಡು ದುಡಿದೆ. ಕರ್ನಾಟಕದ ಅಷ್ಟೂ ಪತ್ರಿಕೆಗಳಿಗೆ ಬರೆದೆ. ಅನೇಕ ಪತ್ರಿಕೆಗಳಿಗೆ ಕೆಲಸಮಾಡಿದೆ. ತುಂಬ ಚಿಕ್ಕ ವಯಸ್ಸಿಗೆ ನನಗಿಂತ ಜಾಸ್ತಿ ವಯಸ್ಸಾದ ಪತ್ರಿಕೆಗಳಿಗೆ ಸಂಪಾದಕನಾದೆ. ಈ ತನಕ ಸರಿಸುಮಾರು ಐವತ್ತಕ್ಕೂ ಹೆಚ್ಚು ಪುಸ್ತಕಗಳು ಪ್ರಕಟವಾಗಿವೆ. ಖುಷ್ವಂತ್ ಸಿಂಗ್, ಚಲಂ, ಪ್ರೊತಿಮಾ ಬೇಡಿ, ಬ್ರಿಗೇಡಿಯರ್ ಜಾನ್.ಪಿ. ದಳವಿ, ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್, ವಿನೋದ್ ಮೆಹ್ತಾ ಮುಂತಾದವರ ಬರಹಗಳನ್ನು ಕನ್ನಡಕ್ಕೆ ಅನುವಾದಿಸಿದ್ದೇನೆ. ಎರಡು ಬಾರಿ ಕರ್ನಾಟಕ ಸಾಹಿತ್ಯ ಅಕಾಡೆಮಿಯವರು ಹಾಗೂ ಕರ್ನಾಟಕ ಮಾಧ್ಯಮ ಅಕಾಡೆಮಿಯವರು ಪ್ರಶಸ್ತಿ ಕೊಟ್ಟಿದ್ದಾರೆ. ಸಣ್ಣಕಥೆ ನನ್ನ ಅತಿ ಇಷ್ಟದ ಪ್ರಕಾರ. ಅದರಲ್ಲೂ ಪ್ರಶಸ್ತಿ, ಬಹುಮಾನಗಳು ಬಂದಿವೆ.

ಸದ್ಯಕ್ಕೆ ನಾನು 'ಹಾಯ್ ಬೆಂಗಳೂರ್!' ಕನ್ನಡ ವಾರಪತ್ರಿಕೆಯ ಹಾಗೂ 'ಓ ಮನಸೇ...' ಪಾಕ್ಷಿಕದ ಸಂಪಾದಕ. ಪ್ರಾರ್ಥನಾ ಎಜುಕೇಷನ್ ಸೊಸೈಟಿಯ ಸಂಸ್ಥಾಪಕ ಕಾರ್ಯದರ್ಶಿ. ಟೀವಿ ಮತ್ತು ರೇಡಿಯೋಗಳಿಗೆ ಪ್ರತಿನಿತ್ಯದ ಕಾರ್ಯಕ್ರಮ ಮಾಡಿಕೊಡುತ್ತೇನೆ. ಸಿನೆಮಾ ನಿರ್ಮಾಣ, ನಿರ್ದೇಶನ ಮತ್ತು ನಟನೆಯಲ್ಲಿ ತೊಡಗಿಕೊಂಡಿದ್ದೇನೆ. ಒಬ್ಬ ಹೆಂಡತಿ, ಮೂವರು ಮಕ್ಕಳ ತಂದೆ. ನನ್ನ ಬಗೆಗಿನ ಉಳಿದ ವಿವರಗಳು ಅನ್ ಇಂಟರೆಸ್ಟಿಂಗ್!' *

– ರವಿ ಬೆಳಗೆರೆ

* 'ಫಸ್ಟ್ ಹಾಫ್', (ಪುಟ–೨೩)

## ೨. ಪ್ರಕಟಿತ ಕೃತಿಗಳು

**ರವಿ ಬೆಳಗೆರೆಯವರು ಇದುವರೆಗೆ ಬರೆದಿರುವ ಪ್ರಕಟಿತ ಕೃತಿಗಳು**

೧. ಅಗ್ನಿ ಕಾವ್ಯ *(ಕವನ ಸಂಕಲನ)*

೨. ದಾರಿ *(ಕಥಾ ಸಂಕಲನ)*

೩. ಪಾ.ವೆಂ. ಹೇಳಿದ ಕಥೆ *(ಕಥಾ ಸಂಕಲನ)*

೪. ಒಟ್ಟಾರೆ ಕಥೆಗಳು *(ಸಮಗ್ರ ಕಥಾ ಸಂಕಲನ)*

❖ **ತೆಲುಗು ಅನುವಾದಿತ ಕೃತಿಗಳು**

೫. ವಿವಾಹ: ಹುಟ್ಟು ಮತ್ತು ಪೂರ್ವೋತ್ತರ

ಮೂಲ: ತಾಪಿ ಧರ್ಮರಾವ್ ಅವರ 'ಪೆಳ್ಳಿದಾನಿ ಪುಟ್ಟು ಪೂರ್ವೋತ್ತರಾಲು'

೬. ನಕ್ಷತ್ರ ಜಾರಿದಾಗ *(ಕಾದಂಬರಿ)*

ಮೂಲ: ಯಂಡಮೂರಿ ವೀರೇಂದ್ರನಾಥ್ ಅವರ 'ಯುಗಾಂತಂ'

೭. ಚಲಂ *(ಆತ್ಮಚರಿತ್ರೆ)*

ಮೂಲ: ಗುಡಿಪಾಟು ವೆಂಕಟ ಚಲಂ

❖ **ಇಂಗ್ಲಿಷ್ ಅನುವಾದಿತ ಕೃತಿಗಳು**

೮. ಹಿಮಾಲಯನ್ ಬ್ಲಂಡರ್ *(೧೯೬೨ರ ಭಾರತ-ಚೀನಾ ಯುದ್ಧ ಕಥನ)*

ಮೂಲ: ಬ್ರಿಗೇಡಿಯರ್ ಜಾನ್.ಪಿ. ದಳವಿ

೯. ರಾಜ ರಹಸ್ಯ *(ರಾಜಕೀಯ-ತನಿಖೆ)*

ಮೂಲ: ಸಿ. ದಿನಕರ್ ಅವರ 'Veerappan prize catch Rajkumar'

೧೦. ಟೈಂ ಪಾಸ್ *(ಆತ್ಮ ಕಥನ)*

ಮೂಲ: ಪ್ರೊತಿಮಾ ಬೇಡಿ

೧೧. ದಿ ಗಾಡ್ ಫಾದರ್ *(ಕಾದಂಬರಿ)*

ಮೂಲ: ಮಾರಿಯೋ ಪ್ಯೂಜೋ

೧೨. ಬ್ಲ್ಯಾಕ್ ಫ್ರೈಡೇ *(೧೯೯೩ರ ಮುಂಬೈ ಸರಣಿ ಸ್ಫೋಟ ಕುರಿತು)*

ಮೂಲ: ಹುಸೇನ್ ಜೈದಿ

೧೩. ದಿ ಕಂಪೆನಿ ಆಫ್ ವಿಮೆನ್ *(ಕಾದಂಬರಿ)*

ಮೂಲ: ಖುಷ್‌ವಂತ್ ಸಿಂಗ್

೧೪. ದೆಲ್ಲಿ *(ಕಾದಂಬರಿ)* *

ಮೂಲ: ಖುಷ್‌ವಂತ್ ಸಿಂಗ್

೧೫. ಹಂತಕಿ ಐ ಲವ್ ಯೂ *(ಕಾದಂಬರಿ)*

ಮೂಲ: Basic Instinct ಇಂಗ್ಲಿಷ್ ಚಲನಚಿತ್ರ

೧೬. ನೀನಾ ಪಾಕಿಸ್ತಾನ? *(ಪಾಕಿಸ್ತಾನದ ರಾಜಕೀಯ, ಭಯೋತ್ಪಾದನೆ, ಉಗ್ರಗಾಮಿ ಸಂಘಟನೆಯನ್ನು ಕುರಿತು)*

ಮೂಲ: ಅಮೀರ್ ಮೀರ್ ಅವರ 'The true face of Jehadees; Inside Pakistan's network of terror

೧೭. ದಂಗೆಯ ದಿನಗಳು *(೧೮೫೭ರ ಸ್ವಾತಂತ್ರ್ಯ ಸಂಗ್ರಾಮವನ್ನು ಕುರಿತು)*

ಮೂಲ: ಮನೋಹರ ಮಳಗಾಂವಕರ್ ಅವರ 'Devil's wind'

೧೮. ಅವನೊಬ್ಬನಿದ್ದ ಗೋಡ್ಸೆ *(ಗಾಂಧೀ ಹತ್ಯೆ ಮತ್ತು ನಾಥೂರಾಮ್ ಗೋಡ್ಸೆಯನ್ನು ಕುರಿತು)*

ಮೂಲ: ಮನೋಹರ ಮಳಗಾಂವಕರ್ ಅವರ 'The men who killed Gandhi'

೧೯. ನಿಜ್ಜ ಪ್ರೀತಿಸ್ತೀಯಾ? *(ಕಾದಂಬರಿ)* *

ಮೂಲ: ಆ್ಯನ್‌ರೂಲ್ ಅವರ 'If you really love me'

೨೦. ಮೇಜರ್ ಸಂದೀಪ್ ಹತ್ಯೆ

ಮೂಲ: ಹರೀಂದರ್ ಬವೇಜಾ (ಸಂಪಾದಕಿ)

❖ **ಅಪರಾಧ (ಕ್ರೈಂ ಕಥನ)**

೨೧. ಪಾಪಿಗಳ ಲೋಕದಲ್ಲಿ *(ಬೆಂಗಳೂರು ಭೂಗತ ಲೋಕವನ್ನು ಕುರಿತು)*

೨೨. ಭೀಮಾ ತೀರದ ಹಂತಕರು *(ಬಿಜಾಪುರ ಜಿಲ್ಲೆಯ ಪಾತಕ ಲೋಕದ ಬಗ್ಗೆ)*

೨೩. ಮೈಸೂರಿನ ಸೀರಿಯಲ್ ಕಿಲ್ಲರ್ ರವೀಂದ್ರ ಪ್ರಸಾದ್ *(ಹತ್ಯಾ ಕಥನ)*

೨೪. ಡಿ ಕಂಪೆನಿ *(ಮುಂಬೈ ಭೂಗತ ಜಗತ್ತನ್ನು ಕುರಿತು)*

❖ **ಕಾದಂಬರಿಗಳು**

೨೫. ಮಾಂಡೋವಿ *(ಪ್ರೇಮ ಕಥನ)*

೨೬. ಹೇಳಿ ಹೋಗು ಕಾರಣ *(ಪ್ರೇಮ ಕಥನ)*

೨೭. ನೀ ಹಿಂಗ ನೋಡಬ್ಯಾಡ ನನ್ನ *(ಪ್ರೇಮ ಕಥನ)*

೨೮. ಅರ್ತಿ *(ಪ್ರೇಮ ಕಥನ)*

೨೯. ಮಾಟಗಾತಿ *(ವಾಮಾಚಾರ)*

೩೦. ಸರ್ಪ ಸಂಬಂಧ *(ವಾಮಾಚಾರ)*

೩೧. ಗೋಲಿಬಾರ್ *(ರಾಜಕೀಯ)*

೩೨. ಒಮರ್ಟಾ *(ಭೂಗತ ಜಗತ್ತು)*

೩೩. ರೇಷ್ಮೆ ರುಮಾಲು *(ಇತಿಹಾಸ)*

೩೪. ಯಂತ್ರ ತಂತ್ರ ಮಂತ್ರ *(ವಾಮಾಚಾರ)* *

೩೫. ಆಂಟಿ ನಿನ್ನೊಲುಮೆಯಿಂದಲೇ *(ಮನೋವೈಜ್ಞಾನಿಕ ಹಾಗೂ ಪ್ರೇಮ ಕಥನ)* *

೩೬. ಜೊತೆ ಜೊತೆಯಲಿ *(ಪ್ರೇಮ ಕಥನ)* *

೩೭. ಮಧ್ಯರಾತ್ರಿಯ ಆ ಮಗ್ಗಲು *(ಪತ್ತೇದಾರಿ)* *

೩೮. ಯೌವ್ವನ ಜೋಪಾನ *(ಸಿನೆಮಾ ಜಗತ್ತನ್ನು ಕುರಿತು)* *

೩೯. ದಿ ಸೆಟ್ಲ್‌ಮೆಂಟ್ *(ಭೂಗತ ಜಗತ್ತು)* *

೪೦. ಕಾಲ್ ಸೆಂಟರ್ ಕಿಲ್ಲಿಂಗ್ *(ಕ್ರೈಂ)* *

೪೧. ಭವಾಲದ ಭೈರಾಗಿ *(ಇತಿಹಾಸ)* *

೪೨. ಆತ್ಮಾ *(ಭೂಗತ ಜಗತ್ತು)* *

೪೩. ಪ್ರದೋಷ *(ವಾಮಾಚಾರ)* *

❖ **ಜೀವನ ಚರಿತ್ರೆ**

೪೪. ಸಂಜಯ *(ಸಂಜಯ್ ಗಾಂಧಿ)*

೪೫. ಇಂದಿರೆಯ ಮಗ ಸಂಜಯ *(ಸಂಜಯ್ ಗಾಂಧಿ)*

೪೬. ಡಯಾನ *(ಬ್ರಿಟನ್ ರಾಜಕುಮಾರಿ ಡಯಾನ)*

೪೭. ಪಾಪದ ಹೂ ಫೂಲನ್ *(ಫೂಲನ್‌ದೇವಿ)*

೪೮. ಪ್ಯಾಸಾ *(ಸಾಹಿರ್ ಲೂಧಿಯಾನ್ವಿ ಬದುಕು ಮತ್ತು ಕವಿತೆಗಳು)*

೪೯. ಸುಭಾಷ್ ಚಂದ್ರ ಬೋಸ್ *

೫೦. ಕೊಂಡಪಲ್ಲಿ ಸೀತಾರಾಮಯ್ಯ *

೫೧. ರಜನೀಶನ ಹುಡುಗಿಯರು *(ಓಷೋ ರಜನೀಶ್)*

೫೨. ಜೀನಾ ಯಹಾಂ, ಮರ್‌ನಾ ಯಹಾಂ *(ಹಿಂದಿ ಚಿತ್ರನಟ ರಾಜ್‌ಕಪೂರ್)* *

❖ **ತನಿಖೆ**

೫೩. ರಾಜೀವ್ ಹತ್ಯೆ ಏಕಾಯಿತು? ಹೇಗಾಯಿತು?

೫೪. ಗಾಂಧೀ ಹತ್ಯೆ ಮತ್ತು ಗೋಡ್ಸೆ *(ಮಹಾತ್ಮಗಾಂಧಿ, ಇಂದಿರಾಗಾಂಧಿ, ರಾಜೀವ್‌ಗಾಂಧಿ ಇವರ ಹತ್ಯೆಯ ಹಿನ್ನೆಲೆ ಹಾಗೂ ನಾಥೂರಾಮ್ ಗೋಡ್ಸೆಯ ವ್ಯಕ್ತಿತ್ವ ಕುರಿತ ಕೃತಿ)*

೫೫. ಬಾಬಾ ಬೆಡ್ ರೂಂ ಹತ್ಯಾಕಾಂಡ *(ಶಿರಡಿ ಸಾಯಿಬಾಬಾನನ್ನು ಕುರಿತು)*

೫೬. ಆಶ್ರಮದ ರಾತ್ರಿಗಳು *(ಸ್ವಾಮಿ ಪ್ರೇಮಾನಂದನ ಆಶ್ರಮ ಕುರಿತು)* *

೫೭. ಒಂದು ಸಿ.ಬಿ.ಐ. ಛಾರ್ಜ್‌ಶೀಟ್ *(ಉತ್ತರ ಪ್ರದೇಶದ ಕವಯಿತ್ರಿ ಮಧುಮಿತಾ ಶುಕ್ಲಾ ಕೊಲೆಯ ತನಿಖೆ)* *

❖ **ಅಂಕಣ ಬರಹ**

೫೮. ಲವ್‌ಲವಿಕೆ *(ಪ್ರೇಮ ಪತ್ರಗಳ ಸಂಕಲನ) (ಭಾಗ–೧, ೨, ೩, ೪,)*

೫೯. ಬಾಟಮ್ ಐಟಮ್ *(ಭಾಗ–೧, ೨, ೩, ೪)*

೬೦. ಕೇಳಿ *(ಪ್ರಶ್ನೋತ್ತರ ಸಂಕಲನ)*

೬೧. ರವಿ ಕಂಡದ್ದು ರವಿ ಕಾಣದ್ದು *(ಸಹ ಲೇಖಕ ಜೋಗಿಯೊಂದಿಗೆ)*

❖ **ಪ್ರವಾಸ ಕಥನ**

೬೨. ಹಿಮಗರ್ಭ *(ಅರುಣಾಚಲ ಪ್ರದೇಶ ಯಾತ್ರೆಯ ಅನುಭವ ಕಥನ)* *

೬೩. ಕಾರ್ಗಿಲ್‌ನಲ್ಲಿ ಹದಿನೇಳು ದಿನ *(ಕಾರ್ಗಿಲ್ ಯುದ್ಧ ಕಥನ)*

೬೪. ಮುಸ್ಲಿಂ *(ಅಫಘಾನಿಸ್ತಾನ್ ಯುದ್ಧ ಭೂಮಿಯ ಅನುಭವ ಕಥನ)*

❖ **ಆತ್ಮಚರಿತ್ರೆ**

೬೫. ಖಾಸ್‌ಬಾತ್ *(೯೬ ರಿಂದ ೨೦೦೩ರ ವರೆಗೆ) (೮-ಸಂಪುಟಗಳು)*

❖ **ಇತರೆ**

೬೬. ಬಯಲ ಬಾಗಿಲಿಗೆ ನಿಂತ ಕಸಾಯಿ *(ಜಾಲಿಯನ್ ವಾಲಾಬಾಗ್ ಹತ್ಯಾಕಥನ)**

೬೭. ಕೊಳ್ಳೇಗಾಲದ ಮಾಂತ್ರಿಕರು *(ವಾಮಾಚಾರ)*

೬೮. ಮನಸೇ... *(ಆಡಿಯೋ ಸಿ.ಡಿ)*

*** ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿರುವ ಕೃತಿಗಳು**

೧. ಕ್ರಮಸಂಖ್ಯೆ: ೧೪ ಮತ್ತು ೬೨ ಈ ಕೃತಿಗಳು ಕರ್ಮವೀರ ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿವೆ

೨. ಕ್ರಮಸಂಖ್ಯೆ: ೩೫ ಈ ಕೃತಿ 'ಓ ಮನಸೇ' ಪಾಕ್ಷಿಕ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿದೆ

೩. ಕ್ರಮಸಂಖ್ಯೆ: ೧೯, ೩೪, ೩೬, ೩೭, ೩೮, ೩೯, ೪೦, ೪೧, ೪೨, ೪೩, ೪೯, ೫೦, ೫೨, ೫೬, ೫೭, ೬೬, – ಈ ಎಲ್ಲಾ ಕೃತಿಗಳು 'ಹಾಯ್ ಬೆಂಗಳೂರ್!' ವಾರಪತ್ರಿಕೆಯಲ್ಲಿ ಧಾರಾವಾಹಿಗಳಾಗಿ ಪ್ರಕಟಗೊಂಡಿವೆ.



## ೩. ಪ್ರಶಸ್ತಿ ಪುರಸ್ಕಾರಗಳು

೧. ತೆಲುಗಿನಿಂದ ಅನುವಾದಿಸಿದ 'ವಿವಾಹ: ಹುಟ್ಟು ಮತ್ತು ಪೂರ್ವೋತ್ತರ' ಕೃತಿಗೆ ೧೯೮೪ರಲ್ಲಿ 'ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ'

೨. ಮಾಸ್ತಿ ಕಥಾ ಸ್ಪರ್ಧೆಯಲ್ಲಿ 'ವಂಧ್ಯಾ' ಕಥೆಗೆ ೧೯೯೦ರಲ್ಲಿ ಪ್ರಥಮ ಬಹುಮಾನ

೩. 'ಪಾ.ವೆಂ. ಹೇಳಿದ ಕಥೆ' ಕಥಾಸಂಕಲನಕ್ಕೆ ೧೯೯೭ರಲ್ಲಿ 'ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ'

೪. 'ಹೇಳಿ ಹೋಗು ಕಾರಣ' ಕಾದಂಬರಿಗೆ ೨೦೦೫ರಲ್ಲಿ 'ಶಿವರಾಮ ಕಾರಂತ ಪ್ರತಿಷ್ಠಾನ ಪ್ರಶಸ್ತಿ'

೫. ಸಾಹಿತ್ಯ ಹಾಗೂ ಪತ್ರಿಕೋದ್ಯಮ ಕ್ಷೇತ್ರದಲ್ಲಿಯ ಸಾಧನೆಗಾಗಿ ೨೦೦೭ರಲ್ಲಿ 'ಶಿವರಾಮ ಕಾರಂತ ಹುಟ್ಟೂರು ಪ್ರಶಸ್ತಿ'

೬. ಜೀವಮಾನದ ಸಾಧನೆಗಾಗಿ ೨೦೦೭ರಲ್ಲಿ 'ಮಾಧ್ಯಮ ಅಕಾಡೆಮಿ ಪ್ರಶಸ್ತಿ'

೭. ಸಾಹಿತ್ಯ ಹಾಗೂ ಪತ್ರಿಕೋದ್ಯಮ ಕ್ಷೇತ್ರದಲ್ಲಿ ಈ ಸಾಧನೆಗಾಗಿ 'ರಾಜ್ಯೋತ್ಸವ ಪ್ರಶಸ್ತಿ'



# * ಗ್ರಂಥ ಋಣ

## ❖ ಕೃತಿಗಳು

೧. ಕುಸುಮಾಕರ ದೇವರಗೆಣ್ಣೂರು, ನಿರೀಂದ್ರಿಯ, ದಿವಾಣಜಿ ಪ್ರಕಾಶನ, ಡೊಂಬಿವಿಲಿ, ಠಾಣೆ, ಮಹಾರಾಷ್ಟ್ರ, ೧೯೯೩

೨. ನಾಗತಿಹಳ್ಳಿ ಚಂದ್ರಶೇಖರ, ನನ್ನ ಪ್ರೀತಿಯ ಹುಡುಗಿಗೆ (ಅಂಕಣ ಬರಹಗಳ ಮೂರನೇ ಸಂಪುಟ), ಅಭಿವ್ಯಕ್ತಿ: ಒಂದು ಸಾಂಸ್ಕೃತಿಕ ವೇದಿಕೆ, ಬೆಂಗಳೂರು, ೨೦೦೪

೩. ಪ್ರಸಾದ್‌ಸ್ವಾಮಿ. ಎಸ್, ಕಥೆ–ಕಥನ, ಧಾತ್ರಿ ಪುಸ್ತಕ, ಬೆಂಗಳೂರು, ೨೦೦೭

೪. ಬಂಜಗೆರೆ ಜಯಪ್ರಕಾಶ, ಉಲಿಯ ಉಯ್ಯಲೆ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫

೫. ಭುವನೇಶ್ವರಿ. ಎಸ್.ಕೆ, ಕಥಾಲೋಕ, ಇಂದ್ರ ಪ್ರಕಾಶನ, ಹುಲಕೋಟಿ, ಗದಗ, ೧೯೮೪

೬. ಭೈರಪ್ಪ ಎಸ್.ಎಲ್, ಕಥೆ ಮತ್ತು ಕಥಾವಸ್ತು, ಸಾಹಿತ್ಯ ಭಂಡಾರ, ಬೆಂಗಳೂರು, ೨೦೦೩

೭. ಮಾವಿನಕೆರೆ ರಂಗನಾಥನ್, ಕಥಾಗುಚ್ಛ, ಮಾಸ್ತಿ ಶತಮಾನೋತ್ಸವ ಸಮಿತಿ, ಬೆಂಗಳೂರು, ೧೯೯೨

೮. ಮೊಗಳ್ಳಿ ಗಣೇಶ್, ಸಣ್ಣ ಕಥೆಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

೯. ಮಂಗಳಾ ಪ್ರಿಯದರ್ಶಿನಿ. ಡಿ, ಬೆಳಗೆರೆ ಪಾರ್ವತಮ್ಮ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೮

೧೦. ರವಿ ಬೆಳಗೆರೆ, ದಾರಿ, ಪ್ರದೀಪ ಪ್ರಕಾಶನ, ಬಳ್ಳಾರಿ, ೧೯೮೦

೧೧. ರವಿ ಬೆಳಗೆರೆ, ಪಾ.ವೆಂ. ಹೇಳಿದ ಕಥೆ, ಅಭಿನವ ಪ್ರಕಾಶನ, ಬೆಂಗಳೂರು, ೧೯೯೫

೧೨. ರವಿ ಬೆಳಗೆರೆ, ಒಟ್ಟಾರೆ ಕಥೆಗಳು, ಅಭಿನವ ಪ್ರಕಾಶನ, ಬೆಂಗಳೂರು, ೧೯೯೮

೧೩. ವೀರಭದ್ರ/ಚಲಂ, ಮೈದಾನ, ಸಂವಹನ ಪ್ರಕಾಶನ, ಮೈಸೂರು, ೧೯೮೯

೧೪. ಶರತ್ ಕಲ್ಕೋಡ್ (ಸಂ). ಫಸ್ಟ್‌ಹಾಫ್, ಭಾವನಾ ಪ್ರಕಾಶನ, ಬೆಂಗಳೂರು, ೨೦೦೮

೧೫. ಶೇಷಗಿರಿರಾವ್.ಎಸ್.ಎಲ್., ಸಾಹಿತ್ಯ, ಸಪ್ನ ಬುಕ್‌ಹೌಸ್, ಬೆಂಗಳೂರು, ೧೯೯೯

* **ಪತ್ರಿಕೆಗಳು**

೧. ಹಾಯ್ ಬೆಂಗಳೂರ್! (ಸೃಷ್ಟಿ–೭೬೨) ಮೇ–೨೭, ೨೦೧೦

೨. ಹಾಯ್ ಬೆಂಗಳೂರ್! (ಸೃಷ್ಟಿ–೭೬೩) ಜೂನ್–೦೩, ೨೦೧೦

೩. ಹಾಯ್ ಬೆಂಗಳೂರ್! (ಸೃಷ್ಟಿ–೭೬೯) ಜುಲೈ–೧೫, ೨೦೧೦

೪. ಕನ್ನಡ ಪ್ರಭ: ದೀಪಾವಳಿ ವಿಶೇಷಾಂಕ–೨೦೦೮

೫. ರುಜುವಾತು (ಜುಲೈ–ಸೆಪ್ಟಂಬರ್: ೧೯೯೫)

೬. ಸೂರ್ಯಶಿಕಾರಿ (ಸೆಪ್ಟಂಬರ್ ೧೬, ೨೦೦೭)

೭. ದ ಸಂಡೇ ಇಂಡಿಯನ್ (ಮಾರ್ಚ್ ೦೭, ೨೦೧೦)

(೭೬ನೇ ಕನ್ನಡ ಸಾಹಿತ್ಯ ಸಮ್ಮೇಳನ ವಿಶೇಷಾಂಕ)

* **ಅಂತರ್ಜಾಲ**

http://ravibelagere.wordpress.com

http://thatskannada.oneindia.in/column/ravibelagere/

www.kendasampige.com/article.php?id=307



